# ವಂಶವೃಕ್ಷ



**ಕಮಲಮಂಡಲ ಪ್ರಕಾಶನ**

ಕರ್ನಾಟಕ ಸಂಘ, ಕರ್ನಾಟಕ ಕಾಲೇಜ

**ಧಾರವಾಡ**

ಪ್ರಕಾಶಕರು :
ಪ್ರೊ. ಎಸ್. ಆರ್. ಮಳಗಿ,
ಎಂ. ಎ., ಬಿ. ಟಿ.
ಕಾರ್ಯಾಧ್ಯಕ್ಷ,
ಕಮಲಮಂಡಲ
ಕರ್ನಾಟಕ ಕಾಲೇಜ, ಧಾರವಾಡ.

ಪ್ರಥಮ ಮುದ್ರಣ ೧೯೫೪

ಬೆಲೆ : ೧—೪—೦

ಮುದ್ರಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ
ಧಾರವಾಡ.

# ಅರ್ಪಣ

ಉತ್ತರ ಕರ್ನಾಟಕದಲ್ಲಿ
ಇಂದಿನ ಕನ್ನಡ ಕಾವ್ಯದ ಪುರಸ್ಕರ್ತರೂ
ಅನೇಕ ವರ್ಷಗಳ ವರೆಗೆ ಕರ್ನಾಟಕ ಕಾಲೇಜಿನ
ವಿದ್ಯಾರ್ಥಿಗಳನೇಕರಿಗೆ ಅನಭಿಷಿಕ್ತ ಪ್ರಾಧ್ಯಾಪಕರೂ
ಕಾವ್ಯಗುರುಗಳೂ ಆದ

ಕವಿವರ್ಯ ಶ್ರೀ. ಅಂಬಿಕಾತನಯದತ್ತರಿಗೆ

**ವಂಶವೃಕ್ಷವನ್ನು**

**ಪ್ರೀತಿಯಿಂದ ಅರ್ಪಿಸಲಾಗಿದೆ.**

# ಹರಕೆ

ಮಾವು-ಮಲ್ಲಿಗೆ ಕೂಡಿ, ಒಡನೂಡಿ
ಕಣ್ದೆರವಿಗೊಂದು ಕಾಣಿಕೆಯಾಗಿ
ಕಂಗೊಳಿಪ ಕಳಶದಾ ಚೆಂದ ನಲ್ಗೋಪುರವೆ !
ಮಮತೆ-ಸಮತೆಯು ಕೂಡಿ ನಿಲ್ಲಿಸದ ಮಂಟಪವೆ !
ಓ ! ಪುರಾತನ ವಂಶವೃಕ್ಷವೇ !
ಚಿಗುರಾಗು, ಹಣ್ಣಾಗು, ಕಾಯಾಗು, ಪಾಡಾಗು,
ಗೊನೆಗೆ ಹಣ್ಣಾಗು — ಅಮೃತ ಬೀಜವ ಕಾಯ್ದು.
ಹಣ್ಣೆಲೆಯನುದುರಿಸುತ್ತಿರು ನಿತ್ಯ
ಚಿಗುರೆಲೆಯು ತಲೆಯೆತ್ತಿ
ಮತ್ತೆ ಕುಣಿಯಲಿ ನಿನ್ನ ಶಾಖೋಪಶಾಖೆಯಲಿ—
ಒಂದೆ ಬುಡಕಟ್ಟಿನಲಿ ಹಲವು ತೊಂಗೆಗಳಾಗಿ
ಹೂಗಳಲಿ ಹಣ್ಗಳಲಿ ಮತ್ತೆ ಹಲಕೆಲವಾಗಿ
( ನಾಳಿನಾ ಬಾಳಿನಾಚೆಗೆ ಒಂದು
ನಾಡಿದಿನ ನಾಡುಂಟು
ಅದು ಅಪೂರ್ವೋದ್ಭವದ ಪುಣ್ಯಕ್ಷೇತ್ರ ! )
ಆ ದೇವಬೀಜಕ್ಕೆ ಭಾಗವತ ತೇಜಕ್ಕೆ
ಯಾವ ರಸವಿಹಿತವೋ ಆ ಸು-ಸಾಹಿತ್ಯಕ್ಕೆ
ನೆರವಾಗು, ಹದವಾಗು, ಕಳಿತ ಗೊಬ್ಬರವಾಗು....
ಭೂತ ಎಂಬುದು ಮಣ್ಣು.
ವರ್ತಮಾನವು ಮರವೆ !
ಆ ಭವಿಷ್ಯದ ಸುದ್ದಿ ನನಗೇಕೆ ?

ಆದರೂ ಹರಕೆ ಹಾಕುವೆ
ಮೂಡಬೆಳ್ಳಿಯು ಉಲಿವ ಹಾಲಕ್ಕಿ ಕಾಲದಲಿ :—
ಮಕ್ಕಳಾಟದ ಮನೆಯು ಮುಂದಾಗಿ,
ಅದ ನೋಡಿ ಹಿಗ್ಗಬಲ್ಲವರ ಸೆರೆ ಒಂದಾಗಿ,
ಅದರ ಜೋಗುಳ ಹಾಡಿ
ಉದಯರಾಗವ ಹೇಳಿ
ಎಚ್ಚರಿಸುವರ ಮೇಳ ಹಿಂದಾಗಿ
ಇಂಥ ವನ — ಉಪವನವು
ಆ ರಾಹು-ಕೇತುಗಳ ತೊಂಡು ತುಟಿ-ತೋಟಿ
ನಿಲುಕದಾ ನಿಲುವಿನಲಿ
ಕನ್ನಡದ ತಾಯಿ ತವರಿನ
ಗಂಧವಾರಣರು !
ಆ ನಂದಿ ಬಸವಗಳು !
ಗಿರಿ ಶಿಖರ ಮುಟ್ಟಿ ಹಾರುವ ಗರುಡ-ಸಿಂಗರು !
ಹುಟ್ಟಿ ಬರಲಿರಲಿ ಚೌಸಷ್ಟಿ ಕಲೆ ಕಲಿತಲ್ಲಿ
ಈ ಚತುರ್ಮುಖದ ಭುವನೇಶ್ವರಿಯ ವಿದ್ಯಾರಣ್ಯ !
ಏಳನೆಯ ಮಾಡದಲಿ
ಕಿಸು-ದಿಟ್ಟಿ ನೋಡದಲಿ
ಘನಕೃಪೆಯ ಮೋಡದಲಿ....
" ಯಜ್ಞಾತ್ ಭವತಿ ಪರ್ಜನ್ಯಃ
ಪರ್ಜನ್ಯಾತ್ ಅನ್ನ ಸಂಭವಃ
ಅನ್ನಾತ್ ಭವಂತಿ ಭೂತಾನಿ....
ಸರ್ವ ಭೂತೇಷು ಯೇನೈಕಂ ಅವ್ಯಯಂ ಈಕ್ಷತೇ.... "
ಓ ! ಕಮಲಮಂಡಲದ ಊರ್ಧ್ವಮುಖದಾಕೃತಿ
ನೈರ್ಮಲ್ಯದಲಿ ನಿನ್ನ ಗಂಧ ಗಮಗಮಗಂಪು

# ಹರಕೆ

ರವಿತಾಪ ಹರಿಸುವ ತಂಪು-
ಬಾವನ್ನವಾಗಿದೆಯೇನೊ !
ನೆಲದೆದೆಯ ಅರ್ಪಣವು ಗರ್ಭಗುಡಿಯಲಿ ಮೂಡಿ
ಕಲಶ-ಮೊಲೆಯಾಗಿ, ಅದೊ, ಬಯಲಿಗುಣಿಸುತ್ತಿಹುದು
ಗಾಳಿ ತೆಳುವಿನ ಸೆರಗ ಮರೆಮಾಡಿ
ಓ, ತೊರೆಬಂತು, ತೆರೆಬಂತು
ಹಾಲಾಗಿ, ಹಕ್ಕಿ-ಸಾಲಾಗಿ
ಹೀಗೆಯೆ ಅನುಗ್ರಹಿಸು ಓ ಮಾತೆ !
ತಾಯಿ-ಹಾಲಿನ ರಿಣವು ತೊಳೆದು ಬಿಡುವದದುಂಟೆ ?

ಸೊಲ್ಲಾಪುರ
೧೭-೧೧-೧೯೫೪

— ಅಂಬಿಕಾತನಯದತ್ತ

# ಪೀಠಿಕೆ

ಕರ್ನಾಟಕ ಕಾಲೇಜಿನ ಹಿಂದಿನ ಹಾಗು ಇಂದಿನ ವಿದ್ಯಾರ್ಥಿಗಳ ಈ ಕವನಸಂಗ್ರಹಕ್ಕೆ ಪೀಠಿಕೆಯೊಂದನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಉತ್ತರ ಕರ್ನಾಟಕದ ಸಾಂಸ್ಕೃತಿಕ ಪುನರುಜ್ಜೀವನ ಧಾರವಾಡದಲ್ಲಿಯೇ ಪ್ರಾರಂಭವಾಯಿತು. ಕರ್ನಾಟಕ ಕಾಲೇಜು ಸ್ಥಾಪನೆಯಾದಂದಿನಿಂದ ಹೊಸ ಪೀಳಿಗೆಗೆ ಈ ಪುನರುಜ್ಜೀವನದ ಪ್ರಜ್ಞೆಯನ್ನು ಕರುಣಿಸುವ ಕೇಂದ್ರವೊಂದು ಸಿದ್ಧವಾಯಿತು. ಚಿಕ್ಕ ಮಹಾಬಲೇಶ್ವರದ ಮೇಲೆ ಇಡಲಾದ ಈ ಕಾಲೇಜಿನ ಕಟ್ಟಡದ ಅಡಿಗಲ್ಲು ಇಂದ್ರಶಿಲೆಯಂತೆ ತಪಿಸುತ್ತ ಕುಳಿತು ಕೊನೆಗೆ ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಪ್ರೇರಣೆಯಾಯಿತಲ್ಲದೆ ತಾನೇ ಆ ವಿದ್ಯಾನಿಲಯವನ್ನು ತಾನಿರುವ ಸ್ಥಾನಕ್ಕೆ ಸೆಳೆದುಕೊಂಡಿತು; ಉಚ್ಚ ಶಿಕ್ಷಣದ ಉಗಮಸ್ಥಾನವಾಯಿತು.

೧೯೦೦ ರಿಂದ ೧೯೩೦ ರ ವರೆಗಿನ ಕಾಲವನ್ನು ಒಂದು ರೀತಿಯಿಂದ ಇಂದಿನ ಕನ್ನಡ ಕಾವ್ಯದ ಸಂಧಿಕಾಲವೆಂದು ಕರೆಯಬಹುದು. ಎಚ್. ನಾರಾಯಣರಾಯರ ಹಾಗು ಬಿ. ಎಂ. ಶ್ರೀಯವರ ಭಾಷಾಂತರ ಕವನಗಳು ಆಗೀಗ ಆ ಕಾಲದಲ್ಲಿ ಅಲ್ಲಲ್ಲಿ ಅಚ್ಚಾಗುತ್ತಿದ್ದವು. ಉತ್ತರ ಕರ್ನಾಟಕದಲ್ಲಿ ಶಾಂತ ಕವಿಗಳೂ ಕಾವ್ಯಾನಂದರೂ ಕಾವ್ಯರಚನೆಯಲ್ಲಿ ನಿರತರಾಗಿದ್ದರು. ಹಳೆಯ ಛಂದಸ್ಸಿನ ಪರಂಪರೆ ಇನ್ನೂ ತೊಲಗಿರಲಿಲ್ಲ. ಆದರೆ ಹಳೆಯ ಛಂದಸ್ಸಿನಲ್ಲಿಯೇ ಆಗಲಿ, ಅಲ್ಲಲ್ಲಿ ಆಂಗ್ಲ ಕವನಗಳ ಅನುವಾದಗಳೂ ನೂತನ ದೃಷ್ಟಿಯುಳ್ಳ ಕವನಗಳೂ ಕಾಣಿಸಿಕೊಳ್ಳುತ್ತಿದ್ದವು. 'ವಂಶವೃಕ್ಷ' ದಲ್ಲಿ ಈ ಕಾಲದ ಪ್ರತಿನಿಧಿಗಳ ಕೃತಿಗಳನ್ನೂ ಕಾಣಬಹುದು. ಶ್ರೀ. ಅಂಕಲಕೋಟೆಯವರ 'ಕುರುಡ ಹುಡುಗ' ಎಂಬ ಕವಿತೆ ಒಂದು ಆಂಗ್ಲ ಕವಿತೆಯ ಅನುವಾದವಾಗಿದೆ. 'ರಾಮಚಂದ್ರ'ರ ಒಂದು ಕವಿತೆಯಲ್ಲಿ ಪರಂಪರೆಯ ಬಗ್ಗೆ ಉಪೇಕ್ಷೆಯೂ ವ್ಯಕ್ತವಾಗಿವೆ. ಕರ್ನಾಟಕ ಕಾಲೇಜಿನ ಔರಸರ ತಲೆಮಾರುಗಳೇ ಈ ವಂಶವೃಕ್ಷ. ಇಲ್ಲಿಯ ಕಾವ್ಯ ಆ ಕರುಳುಬಳ್ಳಿಯ ಕರುಳಿನ ವಚನ. ಈ ಕಾಲೇಜಿನ ಕ್ರೀಡಾಂಗಣದಲ್ಲಿ ಆಡಿ ಹೋದ ನಾಲ್ಕು ದಶಕಗಳ ಕವಿಗಳ ಕೃತಿಗಳು ಸಂಕ್ಷಿಪ್ತವಾಗಿ ಇಂದಿನ ಕನ್ನಡ ಕಾವ್ಯದ ಇತಿಹಾಸವನ್ನೇ ಪ್ರತಿಬಿಂಬಿಸುತ್ತವೆ.

೧೯೨೦ ರಿಂದ ೧೯೩೦ ರ ವರೆಗಿನ ದಶಕವನ್ನು ಇಂದಿನ ಕನ್ನಡ ಕಾವ್ಯದ ಪ್ರಾದುರ್ಭಾವದ ಕಾಲವೆಂದು ಕರೆಯಬಹುದು. ಅದರ ಉಷಃಕಾಲ ಮುಗಿದು ಈ ಅವಧಿಯಲ್ಲಿ ಆ ಕಾಲದ ಸೂರ್ಯೋದಯವಾಯಿತು. ಪರಂಪರೆಯ ಛಂದಸ್ಸನ್ನು ಗ್ರಹಿಸಿ ಈ ಅವಧಿಯ ಕೆಲವು ಕವಿಗಳು ಮುಂದುವರಿದರು. ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಪ್ರಥಮ ಕಾರ್ಯದರ್ಶಿಗಳಾದ ಶ್ರೀ. ಎನ್. ವಿ. ಕುಲಕರ್ಣಿಯವರ ಕೃತಿಗಳಲ್ಲಿ ಇದನ್ನು ಕಾಣಬಹುದು. ಇಂದಿಗೂ ಅವರು ತಮ್ಮ ಮಾರ್ಗವನ್ನು ಅನುಸರಿಸಿದ್ದಾರೆ. ಇಂದಿನ ವಿಮರ್ಶೆಯಲ್ಲಿ ಗಣ್ಯ ಸ್ಥಾನವನ್ನು ಗಳಿಸಿ ನಾಡಿನ ದುರ್ದೈವದಿಂದ ಅಲ್ಪಾವಧಿಯಲ್ಲಿಯೇ ಹೋದ ಶ್ರೀ. ಎ. ಟಿ. ಸಾಸನೂರರೂ 'ಜಯದೇವ' ಎಂಬ ಹೆಸರಿನಲ್ಲಿ ವಿದ್ಯಾರ್ಥಿಗಳಿದ್ದಾಗ ತಮ್ಮ ಕೆಲವು ಕವಿತೆಗಳನ್ನು ಪ್ರಕಟಿಸಿದರು. ಅಲ್ಲಿಯೂ ಷಟ್ಪದಿಯ ಪ್ರಯೋಗವನ್ನು ಕಾಣಬಹುದು. ಈ ಅವಧಿಯಲ್ಲಿ ರಚನೆಗೆ ಪ್ರಾರಂಭಿಸಿದ ಕವಿಗಳೆಲ್ಲ ಬಹುಶಃ ಷಟ್ಪದಿಗೆ ಅಲ್ಪಾವಧಿಯಾದರೂ ಶರಣಾಗತರಾಗಿ ಮುಂದೆ ಹೊಸ ಹೆಜ್ಜೆಯಿಟ್ಟರು. ಶ್ರೀ. ಅಷ್ಟಣಗಿಯವರ ಕೃತಿಗಳಲ್ಲಿಯಂತೆ ಕೆಲವರ ಕಾವ್ಯ ಇಂದಿಗೂ ಈ ಮಿಶ್ರ ಲಕ್ಷಣಗಳಿಗೆ ನಿದರ್ಶಕವಾಗಿದೆ.

ಅಸಹಕಾರದ ಆಂದೋಲನದಿಂದ ಹೊಸದೊಂದು ಸ್ಫೂರ್ತಿ ಈ ದಶಕದ ಜೀವನವನ್ನು ಉದ್ದೀಪಿಸಿತ್ತು. ಇದೇ ಸಮಯದಲ್ಲಿ ಒಂದು ಹೊಸ ಶಕ್ತಿಯು ಮೂಡಿತು. ಶ್ರೀ. ಬೇಂದ್ರೆಯವರು ಧಾರವಾಡದಲ್ಲಿ ಬಂದು ೧೯೨೧ ರಲ್ಲಿ ನೆಲಸಿ ನೂತನ ಕಾವ್ಯದ ಪುರಸ್ಕರ್ತರಾದರು. ಅವರಿಂದ ಕಾವ್ಯದೀಕ್ಷೆ ಹೊಂದಿದ 'ಗೆಳೆಯರ ಗುಂಪಿ'ನ ಗೆಳೆಯರನೇಕರು ನೂತನ ಮಾರ್ಗದ ಕಾವ್ಯರಚನೆಯನ್ನು ಅವರಿಂದ ಸ್ಫೂರ್ತಿ ಪಡೆದು ಪ್ರಾರಂಭಿಸಿದರು. ವಿಕ್ಟೋರಿಯಾ ಶಾಲೆ ಇಲ್ಲವೆ ರಾಷ್ಟ್ರೀಯ ಶಾಲೆಯಲ್ಲಿ ಅವರ ಕೈಕೆಳಗೆ ಕಲಿತ ಕೆಲವು ಗೆಳೆಯರು ಮುಂದೆ ಸಹಜವಾಗಿಯೇ ಶ್ರೀ. ವಿನೀತ ರಾಮಚಂದ್ರರಾಯರಂತೆ ಕರ್ನಾಟಕ ಕಾಲೇಜಿಗೆ ಬಂದರು. ಶ್ರೀ. ಕೃಷ್ಣಕುಮಾರ ಕಾಶ್ಯಪ ಹಾಗೂ ಶ್ರೀ. ಪ್ರಲ್ಹಾದ ನರೇಗಲ್ಲರವರು ಶಾಂತಿನಿಕೇತನಕ್ಕೆ ಹೋಗಿ ಮುಂದೆ ಕರ್ನಾಟಕ ಕಾಲೇಜಿಗೆ ಬಂದರು. ಅಲ್ಲವೆ ಹೊಸ ಕವಿತೆಯಿಂದ ಹಾಗೂ ಶ್ರೀ. ಬೇಂದ್ರೆಯವರ ಪ್ರತಿಭೆಯಿಂದ ಆಕರ್ಷಿತರಾಗಿ ಶ್ರೀ. ಮುಗಳಿ ಹಾಗೂ ಪ್ರಸ್ತುತ ಲೇಖಕನಂತೆ ಕಾಲೇಜಿನ ಕೆಲವು ವಿದ್ಯಾರ್ಥಿಗಳು ಬೇಂದ್ರೆಯವರೆಡೆಗೆ ಸ್ಫೂರ್ತಿಗಾಗಿ ತಿರುಗಿದರು.

ಕಾಲೇಜಿನಲ್ಲಿ ದೊರೆಯದ ನವೀನ ಜೀವನದೃಷ್ಟಿ-ಕಾವ್ಯದೃಷ್ಟಿಗಳು ಅಲ್ಲಿ ಆ ತರುಣರಿಗೆ ದೊರೆತವು. ಕಾಲೇಜಿನಲ್ಲಿ ಆಗೀಗ ಜರಗುತ್ತಿದ್ದ ಬೇಂದ್ರೆಯವರ ಕಾವ್ಯಗಾಯನಗಳು ನೂತನ ಕವಿತೆಯನ್ನು ಲೋಕಪ್ರಿಯವಾಗಿಸಿದವು. ಆದರೂ **ನನಸು, ಕಣಸು, ನಲ್** ಮೊದಲಾದ ಶಬ್ದಗಳ ಚೇಷ್ಟೆ ಅಲ್ಲಲ್ಲಿ ವಿದ್ಯಾರ್ಥಿ ವರ್ತುಲಗಳಲ್ಲಿ ನಡೆಯುತ್ತಿತ್ತು. ಈ ಅವಧಿಯಲ್ಲಿ ಅನಭಿಷಿಕ್ತ ಪ್ರಾಧ್ಯಾಪಕರಾಗಿ ಶ್ರೀ. ಬೇಂದ್ರೆಯವರು ಕಾಲೇಜಿನ ಅನೇಕ ವಿದ್ಯಾರ್ಥಿಗಳಿಗೆ ಜೊತೆಯಾಗಿ ಸ್ಫೂರ್ತಿದಾಯಕರಾದರು. ನಡುವೆ ಒಂದೆರಡು ವರ್ಷಗಳನ್ನು ಬಿಟ್ಟರೆ ೧೯೪೩ ರಲ್ಲಿ ಧಾರವಾಡವನ್ನು ಅವರು ಬಿಡುವವರೆಗೆ ಬೇಂದ್ರೆಯವರ ಮಾರ್ಗದರ್ಶಿತ್ವ ಅನೇಕ ವಿದ್ಯಾರ್ಥಿಗಳಿಗೆ ದೊರೆಯಿತು. ೧೯೨೯ ರಲ್ಲಿ ಜರುಗಿದ ಬೆಳಗಾವಿ ಸಾಹಿತ್ಯ ಸಮ್ಮೇಲನದಲ್ಲಿ ಅಖಿಲ ಕರ್ನಾಟಕದಿಂದ ಮನ್ನಣೆ ಪಡೆದ ಅವರ ಕಾವ್ಯ ಮುಂದೆ ಹೊಸಗನ್ನಡ ಕಾವ್ಯವನ್ನೇ ರೂಪಿಸುವ ಶಕ್ತಿಗಳಲ್ಲೊಂದಾಗಿ ಈ ಕಾಲೇಜಿನ ವಿದ್ಯಾರ್ಥಿಗಳ ಕೃತಿಗಳ ಮೇಲೂ ಸಹಜವಾಗಿಯೇ ತನ್ನ ಪ್ರಭಾವವನ್ನು ಬೀರಿತು. ಶ್ರೀ. ಕಣವಿಯವರ ಸಾಧನಕೇರಿ ವರ್ಣನೆಯಲ್ಲಿಯೂ ಇದರ ಹೊಳವನ್ನು ಕಾಣಬಹುದು.

ಶ್ರೀ. ಸಾಲಿ ರಾಮಚಂದ್ರರಾಯರ ಕವನಗಳು ಆಗೀಗ ಷಟ್ಪದಿಯಲ್ಲಿ-ದ್ದರೂ ಒಂದು ನೂತನ ದೃಷ್ಟಿಯ ದೃಷ್ಟಾಂತಗಳಾಗಿದ್ದವು. ಅವೂ ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸಿದವು. ಶ್ರೀ. ಕೃಷ್ಣಶರ್ಮ ಬೆಟಗೇರಿಯವರು ಧಾರವಾಡದಲ್ಲಿಯ 'ಗೆಳೆಯರ ಗುಂಪಿ'ನ ಪ್ರಸಿದ್ಧ ಕತೆಗಾರರಾಗಿ, ಕವಿಗಳಾಗಿ ಗುಂಪು ನಡೆಯಿಸಿದ **ಸ್ವಧರ್ಮ, ಜಯಕರ್ನಾಟಕ** ಪತ್ರಿಕೆಗಳಲ್ಲಿ ಇದೇ ಕಾಲದಲ್ಲಿ ಕಾಣಿಸಿಕೊಂಡರು. ಕೈ. ಶ್ರೀ. ಬಸವನಾಳರವರ ನೇತೃತ್ವದಲ್ಲಿ ವಚನ ಸಾಹಿತ್ಯವನ್ನು ಅಭ್ಯಸಿಸಲು ಶ್ರೀ. ವೀರಭದ್ರಪ್ಪ ಕೊಪ್ಪಳ ಮೊದಲಾದವರನ್ನೊಳಗೊಂಡ ಇನ್ನೊಂದು ತರುಣರ ಪಂಗಡ ಸಿದ್ಧವಾಗಹತ್ತಿತು. ಅಂತೂ ನವೀನ ಜೀವನ-ಸಾಹಿತ್ಯಗಳು ಧಾರವಾಡದಲ್ಲಿ ತಲೆಯೆತ್ತಿದವು.

ಶ್ರೀ. ಜಿ. ವಿ. ಕಟ್ಟಿಯವರ ಮತ್ತು 'ಜಯದೇವ'ರ ಕೃತಿಗಳು ಕ್ರಮವನ್ನು ತಪ್ಪಿ ಅಚ್ಚಾಗಿದ್ದರೂ ಅವರೂ ಇದೇ ದಶಕದವರು. ಧಾರವಾಡದಲ್ಲಿ ಗಣ್ಯ ವಕೀಲರಾಗಿ ಕೆಲಸ ಮಾಡುತ್ತಿರುವ ಶ್ರೀ. ಬಿ. ಎಸ್. ಪಾಟೀಲರವರ ಒಂದೆರಡು ಕವನಗಳೂ ಇಲ್ಲಿ ಅಚ್ಚಾಗಬೇಕಾಗಿತ್ತು. ವಿದ್ಯಾರ್ಥಿಯಾಗಿದ್ದಾಗ

ಶ್ರೀ. ಎ. ಟಿ. ಸಾಸನೂರರವರೊಡನೆ 'ಮಂಗಮಟ' ವೆಂಬ ಸಂಘವನ್ನು ಸ್ಥಾಪಿಸಿ ಅವರು ಸಾಹಿತ್ಯ ರಚನೆ ಹಾಗೂ ವಿಮರ್ಶೆಯಲ್ಲಿ ಪ್ರಮುಖ ಭಾಗ ವಹಿಸಿದರು.

ಸುಮಾರು ೧೯೩೦ ರಿಂದ ೧೯೪೦ ರ ವರೆಗಿನ ದಶಕದಲ್ಲಿ ಹೊಸಗನ್ನಡ ಕವಿತೆಯು ಜೀವನದ ಅಂದವಾದ ಬದುಕಾಗಿದೆ. ಅದರ ಬಗ್ಗೆ ಎಲ್ಲಿ ಯಾವ ಅಸ್ಪಷ್ಟತೆಯೂ ಉಳಿದಿಲ್ಲ. ಮಾಳವಾಡ, ಕರ್ಕಿ, ಸೇತುರಾಮು, ಕೆ. ಟಿ. ಪುರಾಣಿಕ, ಎನ್. ಕೆ. ಕುಲಕರ್ಣಿ, ಎಸ್. ಆರ್. ಕುಲಕರ್ಣಿ ಮೊದಲಾದವರ ಆಗಿನ ಶೈಲಿಯಲ್ಲಿ ಒಂದು ನಿರ್ದಿಷ್ಟತೆಯೂ ಅನಾಯಾಸತೆಯೂ ಬಂದಿವೆ. ೧೯೪೦ ರಿಂದ ೧೯೫೦ ವರೆಗೆ ಬಿ. ಟಿ. ಸಾಸನೂರ, ಚಿತ್ತಾಳ, ವಾಡಪ್ಪಿ, ಚಿದಂಬರ ದೀಕ್ಷಿತ, ಕಣವಿ, ಮೊಕಾಶಿ, ಕವಲಿ, ಕೀರ್ತಿ, ಶಾಂತಿನಾಥ ದೇಸಾಯಿ, ಆರ್. ಸಿ. ಭೂಸನೂರಮಠ, ಪಾಟೀಲ-ಕುಲಕರ್ಣಿ ಮೊದಲಾದ ಉದಯಮಾನ ಹಾಗು ಉದಿತ ಕವಿಗಳೂ ಲೇಖಕರೂ ನಮ್ಮೆದುರು ಬರುತ್ತಾರೆ. ಈ ದಶಕದ ವಸ್ತು-ರೀತಿಗಳಲ್ಲಿ ಆಗಿನ ಕಾವ್ಯದಲ್ಲಿ ಒಟ್ಟಾರೆ ಬರುವಂತೆ ಒಂದು ಹೆಚ್ಚಿನ ವೈವಿಧ್ಯವನ್ನು ನಾವು ಕಾಣಬಹುದು. ೧೯೫೦ ರಿಂದ ಮುಂದಿನ ವರ್ಷಗಳಲ್ಲಿ ಜಿನದತ್ತ ದೇಸಾಯಿ, ಆರ್. ಜಿ. ಕುಲಕರ್ಣಿ, ಕಮಲಾಪೂರ ಮೊದಲಾದ ತರುಣರು ಕಾವ್ಯರಚನೆಯಲ್ಲಿ ಮುಂದಡಿಯಿಟ್ಟಿದ್ದಾರೆ. ಹೀಗೆ ಶಾಖೋಪಶಾಖೆಯಾಗಿ ಕೊನರಿ ಕೊನರುತ್ತಲಿದೆ ಈ ವಂಶವೃಕ್ಷ.

ಈಗ ಬರೆಯದೆ ಬರಿ ಕಾಲೇಜಿನಲ್ಲಿದ್ದಾಗ ತಮ್ಮ ಕೃತಿಗಳನ್ನು ಮಿಸೆಲನಿಯಲ್ಲಿ ಪ್ರಸಿದ್ಧಿಸಿದ ಕವಿಗಳ ಕವನಗಳನ್ನು ಬಿಟ್ಟರೆ ಉಳಿದ ಕವನಗಳೆಲ್ಲ ಬಹುಮಟ್ಟಿಗೆ ೧೯೪೭ ರಿಂದ ಈಚೆಗೆ ಬರೆದ ಕವನಗಳೆಂದು ಹೇಳಬಹುದು. ಈ ದೃಷ್ಟಿಯಿಂದ ಸ್ವಾತಂತ್ರ್ಯೋತ್ತರ ಕನ್ನಡ ಕವಿತೆಯ ಒಲವುಗಳನ್ನೂ ಈ ಸಂಕಲನದಿಂದ ಗ್ರಹಿಸುವದು ಸಾಧ್ಯ. ಕವಿಗಳ ಬಗ್ಗೆ ಕೊಟ್ಟ ಮಾಹಿತಿಯಲ್ಲಿ ಯಾವ ಕವಿತೆಗಳು ಸ್ವಾತಂತ್ರ್ಯೋತ್ತರವಲ್ಲವೆಂಬುದನ್ನು ಪ್ರಕಾಶಕರು ಸೂಚಿಸಿದ್ದಾರೆ. ಈ ಕಾಲಾವಧಿಯಲ್ಲಿ ದ್ವಿತೀಯ ಪ್ರಾಸವನ್ನು ಕಾಯ್ದುಕೊಂಡ **ಬಾಳು ಹಾಳು** ಹಾಗು **ತಾಳ** ಎಂಬ ಷಟ್ಪದಿ ಕವಿತೆಗಳಿವೆ. **ತಂಗಾಳಿ, ನವೋದಯ, ಕೂಡಲ ಸಂಗಮೆದೆಡೆಯಲ್ಲಿ, ನೆರಳು-ಬೆಳಕು, ಅಹಲ್ಯೆ, ಅಂತರ,**

**ಬಂಜೆಗನಸು**, **ಬಿಸಿಲು-ಮಳೆ** ಎಂಬ ಮುಕ್ತ ಛಂದದ ಕವಿತೆಗಳಿವೆ. **ಬಡತನದ ಮಾರಿ, ಬಲ್ಲವಳು** ಹಾಗು **ಸಮಾಗಮ**ದಂತಹ ಬೇಂದ್ರೆ-ಜಾನಪದ ಮಾದರಿಯ ಭಾವಗೀತೆಗಳಿವೆ. **ಅರಿಶಿನದ ಹೂ**ವಂತಹ ಅಷ್ಟ-ಷಟ್ಪದಿಗಳಿವೆ. **ಪಣತಿ**ಯಂತಹ ಅನಿರ್ಬಂಧಿತ ಓಡುಗಳಿವೆ.

**ನವೀನ ಜನನ**, **ಪಣತಿ** **ಪಡುಗಡಲು**, **ಅಂತರ**, **ಬಂಜೆಗನಸು** ಎಂಬಲ್ಲಿ ನವ್ಯಕಾವ್ಯ ಬಂದಿದೆ. ಆದರೆ ಇದರ ಜೊತೆಗೆ **ಜೀವದೇವ, ದೇವಾಲಯದಲ್ಲಿ ಬಾಲವಿಧವೆ** ಹಾಗು **ಯಕ್ಷಿಣೀಸಂದೇಶ**ದಂತಹ ಹಾಡುಗಳೂ ಬೇರೆ ಪ್ರಕಾರದ ಭಾವಗೀತೆಗಳೂ ಇವೆ.

ಒಟ್ಟಾರೆ, **ವಂಶವೃಕ್ಷ**ದಲ್ಲಿ ಹೊಸಗನ್ನಡ ಕವಿತೆಯ ಸಂಕ್ಷಿಪ್ತ ಇತಿಹಾಸವಿದೆ. ರಸಿಕರು ಈ ಪ್ರಕಾಶನವನ್ನು ಪ್ರೋತ್ಸಾಹಿಸುವರೆಂದು ಭಾವಿಸಿದ್ದೇನೆ.

ಕರ್ನಾಟಕ ಕಾಲೇಜು,
ಧಾರವಾಡ.
೨೫—೧೧—೧೯೫೪.

**ವಿ. ಕೃ. ಗೋಕಾಕ.**

# ಕರ್ನಾಟಕ ಸಂಘದ ಹಿಂದಿನ ಸದಸ್ಯರ ಸಂಕ್ಷಿಪ್ತ ಪರಿಚಯ

ಶ್ರೀ. ಎಮ್. ಎಸ್. ಅಂಕಲಕೋಟಿ :— ಕಾಲೇಜಿನಲ್ಲಿದ್ದ ಅವಧಿ ಸು. ೧೯೧೭-೨೧. ಪ್ರಸ್ತುತ ಕವನರಚನೆ ೧೯೧೮ ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಶ್ರೀ. ರಾಮಚಂದ್ರ ( ವಿನೀತ ರಾಮಚಂದ್ರರಾಯರು, ಬಿ. ಎ. ) ಜನ್ಮ ದಿನಾಂಕ ೩೦-೧-೧೯೦೫. ಕಾಲೇಜಿನಲ್ಲಿದ್ದ ಅವಧಿ ೧೯೨೧-೨೫. ಪ್ರಸ್ತುತ ಕವನ ರಚನೆ ೧೯೨೨ರಲ್ಲಿ. ( ಕಾಲೇಜ ಮಿಸಲೆನಿಯಿಂದ ).

ಶ್ರೀ. ಎನ್. ವ್ಹಿ. ಕುಲಕರ್ಣಿ ಬಿ. ಎ., ಬಿ. ಟಿ. :— ಶಿಕ್ಷಕರು, ಮಾರಿಕಾಂಬಾ ಹಾಯಸ್ಕೂಲ, ಸಿರ್ಸಿ; ಜ. ದಿ. ೨೪-೧-೧೯೦೦; ಕಾಲೇಜಿನಲ್ಲಿದ್ದ ಅವಧಿ ೧೯೨೨-೨೬: ಪ್ರಸ್ತುತ ಕವನ ರಚನೆಯ ಕಾಲ ೧೯೪೫.

ಶ್ರೀ. ಎಸ್. ವ್ಹಿ. ಅಡ್ಡಣಗಿ, ಬಿ. ಎ., ಎಲ್ಎಲ್. ಬಿ.:— ವಕೀಲರು, ಬೆಳಗಾವಿ. ಜ. ದಿ. ೫-೩-೧೯೦೧; ಕಾಲೇಜಿನಲ್ಲಿದ್ದ ಅವಧಿ ೧೯೨೧-೨೬; ಪ್ರಸ್ತುತ ಕವನ ರಚನೆ ೧೯೫೧ರಲ್ಲಿ.

ಪ್ರೊ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ.:— ಕನ್ನಡ ಪ್ರಾಧ್ಯಾಪಕರು, ವಿಲಿಂಗ್ಡನ್ ಕಾಲೇಜ, ಸಾಂಗಲಿ. ಜ. ದಿ. ೧೫-೭-೧೯೦೪. ಕಾಲೇಜಿನಲ್ಲಿದ್ದ ಅವಧಿ ೧೯೨೫-೩೦; ಪ್ರಸ್ತುತ ಕವನಗಳ ರಚನೆ— ( ೧ ) ೧೯೫೩ ( ೨ ) ೧೯೫೨.

ದಿ. ಗಂಗಾಪ್ರಸಾದ ತಿವಾರಿ :— ಕಾಲೇಜಿನಲ್ಲಿದ್ದ ಅವಧಿ ಸು. ೧೯೨೫-೨೯; ಪ್ರಸ್ತುತ ಕವನ ರಚನೆ ೧೯೨೯ರಲ್ಲಿ ( ಕಾಲೇಜ ಮಿಸಲೆನಿಯಿಂದ ).

ಪ್ರಿ. ವಿನಾಯಕ [ ಪ್ರಿ. ವಿ. ಕೃ. ಗೋಕಾಕ. ಎಂ.ಎ. (ಆಕ್ಸನ್) ] :— ಪ್ರಿನ್ಸಿಪಾಲರು, ಕರ್ನಾಟಕ ಕಾಲೇಜ, ಧಾರವಾಡ. ಜ. ದಿ. ೯-೮-೧೯೦೯, ಕಾಲೇಜಿನಲ್ಲಿದ್ದ ಅವಧಿ ೧೯೨೫-೩೧. ಪ್ರಸ್ತುತ ಕವನಗಳ ರಚನೆಯ ಕಾಲ ( ೧ ) ೧೯೫೨ ( ೨ ) ೧೯೪೯.

ಶ್ರೀ. ಜಿ. ವಿ. ಕಟ್ಟಿ, ಬಿ.ಎ., ಎಲ್‌ಎಲ್. ಬಿ., ವಕೀಲರು, ಬೆಳಗಾವಿ. ಜ. ದಿ. ೨೬-೮-೧೯೦೭; ಕಾಲೇಜಿನಲ್ಲಿದ್ದ ಅವಧಿ ೧೯೨೫-೩೦; ಪ್ರಸ್ತುತ ಕವನಗಳ ರಚನೆಯ ಕಾಲ (೧) ೧೯೩೫ (೨) ೧೯೫೨.

ದಿ. ಜಯದೇವ (ದಿ. ಪ್ರೊಫೆಸರ ಎ.ಟಿ. ಸಾಸನೂರ, ಎಂ.ಎ):—ಜನನ ೧೯೦೮, ಮರಣ ಮೇ ೧೯೩೬; ಕಾಲೇಜಿನಲ್ಲಿದ್ದ ಅವಧಿ ೧೯೨೫-೩೧; ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಕರಾಗಿದ್ದ ಅವಧಿ ೧೯೩೩-೩೬. ಪ್ರಸ್ತುತ ಕವನ ರಚನೆ ೧೯೨೮ರಲ್ಲಿ (ಕಾಲೇಜಿನ ಮಿಸಲೆನಿಯಿಂದ).

ಶ್ರೀ. ಕೃಷ್ಣಕುಮಾರ ಕಾಶ್ಯಪ, ಎಂ. ಎ. :— ಪ್ರಿನ್ಸಿಪಾಲ, ಪಾಠಕ ಇಂಡಸ್ಟ್ರಿಯಲ್ ಸ್ಕೂಲ, ಮುಂಬಯಿ; ಕಾಲೇಜಿನಲ್ಲಿದ್ದ ಅವಧಿ ಸು. ೧೯೨೬-೩೦. ಪ್ರಸ್ತುತ ಕವನಗಳ ರಚನೆಯ ಕಾಲ ೧೯೪೩.

ಶ್ರೀ. ಪ್ರಲ್ಹಾದ ನರೇಗಲ್, ಎಂ. ಎ., ಬಿ. ಟಿ. :— ಶಿಕ್ಷಕರು, ನ್ಯೂ ಇಂಗ್ಲಿಷ ಸ್ಕೂಲ, ಹುಬ್ಬಳ್ಳಿ. ಜ. ದಿ. ೧೯-೬-೧೯೦೭; ಕಾಲೇಜಿನಲ್ಲಿದ್ದ ಅವಧಿ ೧೯೨೮-೩೦.

ಡಾ. ಡಿ. ಎಸ್. ಕರ್ಕಿ, ಎಂ.ಎ., ಪಿ.ಎಚ್.ಡಿ. :— ಪ್ರಿನ್ಸಿಪಾಲರು, ಕಾಡಸಿದ್ಧೇಶ್ವರ ಆರ್ಟ್ಸ ಕಾಲೇಜ, ಹುಬ್ಬಳ್ಳಿ. ಜ. ದಿ. ೧೫-೧೧-೧೯೦೭; ಕಾಲೇಜಿನಲ್ಲಿದ್ದ ಅವಧಿ ೧೯೩೦-೩೪; ಪ್ರಸ್ತುತ ಕವನಗಳ ರಚನೆಯ ಕಾಲ (೧) ೧೯೫೨ (೨) ೧೯೪೬.

ಪ್ರೊ. ಸ. ಸ. ಮಾಳವಾಡ, ಎಂ. ಎ. :— ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ಕಾಲೇಜ ಮತ್ತು ಡೈರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ. ಜ. ದಿ. ೧೪-೧೧-೧೯೧೦; ಕಾಲೇಜಿನಲ್ಲಿದ್ದ ಅವಧಿ ೧೯೨೯-೩೫, ಪ್ರಸ್ತುತ ಕವನ ರಚನೆ ೧೯೪೧ರಲ್ಲಿ (ಕಾಲೇಜಿನ ಮಿಸಲೆನಿಯಿಂದ).

ಶ್ರೀ. ಸೇತುರಾಮ (ಪ್ರೊ. ಎಸ್. ಆರ್. ಮಳಗಿ, ಎಂ.ಎ., ಬಿ.ಟಿ.):— ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ಕಾಲೇಜ, ಧಾರವಾಡ. ಜ. ದಿನಾಂಕ ೮-೭-೧೯೧೧; ಕಾಲೇಜಿನಲ್ಲಿದ್ದ ಅವಧಿ ೧೯೩೦-೩೬: ಪ್ರಸ್ತುತ ಕವನಗಳ ರಚನೆ ಕಾಲ (೧) ೧೯೪೭ (೨) ೧೯೫೨.

ಪ್ರೊ. ಎಸ್. ಎಸ್. ಭೂಸನೂರಮಠ, ಎಂ.ಎ. :— ಕನ್ನಡ ಪ್ರಾಧ್ಯಾಪಕರು, ಲಿಂಗರಾಜ ಕಾಲೇಜ, ಬೆಳಗಾವಿ; ಜ. ದಿ. ೧೯೧೧; ಕಾಲೇಜಿನಲ್ಲಿದ್ದ

ಅವಧಿ ೧೪೩೧-೩೬; ಪ್ರಸ್ತುತ ಕವನ ರಚನೆ ೧೯೪೧ ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಶ್ರೀ. ಜಿ. ಕೆ. ಹೆಗಡೆ, ಬಿ. ಎ., ಬಿ. ಟಿ. :— ಶಿಕ್ಷಕರು, ಮಾರಿಕಾಂಬಾ ಹಾಯಸ್ಕೂಲ, ಸಿರ್ಸಿ; ಜ. ದಿ. ಆನಂದ / ಜ್ಯೇಷ್ಠ ಶುದ್ಧ ೧೩, ಶನಿವಾರ; ಕಾಲೇಜಿನಲ್ಲಿದ್ದ ಅವಧಿ ೧೯೩೧-೩೫ ಪ್ರಸ್ತುತ ಕವನಗಳ ರಚನೆ—(೧) ೧೯೪೫ ( ೨ ) ೧೯೫೩.

ಶ್ರೀ. ಕೃಷ್ಣಮೂರ್ತಿ ಪುರಾಣಿಕ, ಬಿ.ಎ., ಬಿ.ಟಿ. :— ಶಿಕ್ಷಕರು, ಮುನಸಿಪಲ್ ಹಾಯಸ್ಕೂಲ, ಗೋಕಾಕ. ಜ. ದಿ. ಸುಮಾರು ೧೯೧೪ರಲ್ಲಿ; ಕಾಲೇಜಿನಲ್ಲಿದ್ದ ಅವಧಿ ೧೯೩೩-೩೬; ಪ್ರಸ್ತುತ ಕವನಗಳ ರಚನೆ ೧೯೪೭ರ ಈಚೆಗೆ.

ಶ್ರೀ. ಎಸ್ಕೆ (ಶ್ರೀ. ಎಸ್. ಕೆ. ಕುಲಕರ್ಣಿ, ಎಂ.ಎ., ಬಿ.ಟಿ.):—ಟ್ರಾನ್ಸ್ಮಿಶನ್ ಆಫೀಸರ, ಬಾನುಲಿ ಕೇಂದ್ರ, ಧಾರವಾಡ. ಜ. ದಿ. ೨೯-೮-೧೯೩೩; ಕಾಲೇಜಿನಲ್ಲಿದ್ದ ಅವಧಿ ೧೯೩೨-೩೭; ಪ್ರಸ್ತುತ ಕವನ ರಚನೆ ೧೯೪೮. ರಲ್ಲಿ.

ಶ್ರೀ. ಕುಲಕರ್ಣಿ ಸ್ವಾಮಿರಾಯರು, ಎಂ. ಎ. :— ಕನ್ನಡ ಸ್ಟಾಫ್ ಆರ್ಟಿಸ್ಟ, ಬಾನುಲಿ ಕೇಂದ್ರ, ಮುಂಬಯಿ. ಜ. ದಿ. ೨೫-೩-೧೯೧೬, ಕಾಲೇಜಿನಲ್ಲಿದ್ದ ಅವಧಿ ೧೯೩೭ರಿಂದ ೪೦ ಮತ್ತು ೧೯೪೩ರಿಂದ ೪೪; ಪ್ರಸ್ತುತ ಕವನಗಳ ರಚನೆಯ ಕಾಲ ( ೧ ) ೧೯೫೩ ( ೨ ) ೧೯೫೦.

ದಿ. ನಾ. ಗೋ. ದೇವ :— ಕಾಲೇಜಿನಲ್ಲಿದ್ದ ಅವಧಿ. ಸು. ೧೯೩೪-೪೦, ಪ್ರಸ್ತುತ ಕವನ ರಚನೆ ೧೯೩೯ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಪ್ರೊ. ಆರ್. ಸಿ. ಹಿರೇಮಠ, ಎಂ.ಎ. :— ಕನ್ನಡ ರೀಡರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಜ. ದಿ. ೧೫-೫-೧೯೨೨, ಕಾಲೇಜಿನಲ್ಲಿದ್ದ ಅವಧಿ ೧೯೩೯-೪೦; ಪ್ರಸ್ತುತ ಕವನ ರಚನೆ ೧೯೪೦ ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಪ್ರೊ. ಬಿ. ಟಿ. ಸಾಸನೂರ, ಎಂ. ಎ. :— ಕನ್ನಡ ಪ್ರಾಧ್ಯಾಪಕರು, ವಿಜಯ ಕಾಲೇಜ, ವಿಜಾಪೂರ; ಜ. ದಿ. ೧-೮-೧೯೨೫; ಕಾಲೇಜಿನಲ್ಲಿದ್ದ ಅವಧಿ ೧೯೩೯-೪೫, ಪ್ರಸ್ತುತ ಕವನ ರಚನೆ ೧೯೪೧ ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಶ್ರೀ. ಬಿ. ಆರ್. ವಾಡಪ್ಪಿ, ಎಂ.ಎ. :— ಶಿಕ್ಷಕರು, ಕರ್ನಾಟಕ ಹಾಯ

ಸ್ಕೂಲ, ಧಾರವಾಡ; ಜ. ದಿ. ೧೯೧೪; ಕಾಲೇಜಿನಲ್ಲಿದ್ದ ಅವಧಿ ೧೯೪೦-೪೬; ಪ್ರಸ್ತುತ ಕವನ ರಚನೆ ೧೯೪೭ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಶ್ರೀ. ಗಂಗಾಧರ ಚಿತ್ತಾಲ, ಬಿ.ಎ., ಆಯ್.ಎ.ಎಸ್ :— ಡೆಪ್ಯೂಟಿ ಚೀಫ ಆಡಿಟರ, ವೆಸ್ಟರ್ನ ರೇಲ್ವೆ, ಮುಂಬಯಿ; ಜ. ದಿ. ೧೨-೧೦-೧೯೨೩; ಕಾಲೇಜಿನಲ್ಲಿದ್ದ ಅವಧಿ ೧೯೪೦-೪೨; ಪ್ರಸ್ತುತ ಕವನಗಳ ರಚನೆ ೧೯೪೭ರ ಈಚೆಗೆ.

ಕು. ಅಂಬಕ್ಕಾ ಸೋನಾರ( ಕು. ಅಂಬೂತಾಯಿ. ಸ್ಥಿ. ಕುಮಠಾಕರ, ಬಿ.ಎ., ಬಿ.ಟಿ. ) :— ಲೇಡಿ ಸ್ಪೆಶಲ್ ಎಜ್ಯುಕೇಶನ್ ಆರ್ಗನಾಯಿಜರ, ಇಂಡಿ ಪ್ರೊಜೆಕ್ಟ ವಿಭಾಗ. ಕಾಲೇಜಿನಲ್ಲಿದ್ದ ಅವಧಿ ೧೯೪೧-೪೫, ಪ್ರಸ್ತುತ ಕವನ ರಚನೆ ೧೯೪೩ರಲ್ಲಿ ( ಕಾಲೇಜಿನ ಮಿಸಲೆನಿಯಿಂದ ).

ಶ್ರೀ. ಫ. ಬ. ದೇಸಾಯಿ, ಎಂ.ಎ., ಬಿ.ಟಿ. :— ಶಿಕ್ಷಕ, ಲ್ಯಾಮಿಂಗಟನ್ ಹಾಯಸ್ಕೂಲ, ಹುಬ್ಬಳ್ಳಿ; ಜ. ದಿ. ೫-೫-೧೯೨೬; ಕಾಲೇಜಿನಲ್ಲಿದ್ದ ಅವಧಿ ೧೯೪೩-೪೯; ಪ್ರಸ್ತುತ ಕವನ ರಚನೆ ೧೯೫೫ರಲ್ಲಿ (ಕಾಲೇಜಿನ ಮಿಸಲೆನಿಯಿಂದ).

ಶ್ರೀ ಚಿದಂಬರ ದೀಕ್ಷಿತ, ಎಂ.ಎ. :— ಕನ್ನಡ ಪ್ರಾಧ್ಯಾಪಕರು, ರೂಪ ರೇಲಾ ಮತ್ತು ಖಾಲಸಾ ಕಾಲೇಜ, ಮುಂಬಯಿ; ಜ. ದಿ. ೧೪-೭-೧೯೨೪; ಕಾಲೇಜಿನಲ್ಲಿದ್ದ ಅವಧಿ ೧೯೪೬-೫೨; ಪ್ರಸ್ತುತ ಕವನ ರಚನೆ (೧) ೧೯೫೨ (೨) ೧೯೫೧.

ಶ್ರೀ. ಚೆನ್ನವೀರ ಕಣವಿ, ಎಂ. ಎ. :— ಕಾರ್ಯದರ್ಶಿ, ಪ್ರಕಟನಾ ಸಮಿತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಜ. ದಿ. ೨೭-೭-೧೯೨೮; ಕಾಲೇಜಿನಲ್ಲಿದ್ದ ಅವಧಿ ೧೯೪೫-೫೧; ಪ್ರಸ್ತುತ ಕವನಗಳ ರಚನೆ (೧) ೧೯೫೪ (೨) ೧೯೫೩.

ಶ್ರೀ. ಶಂ. ರಾ. ಮೋಕಾಶಿ ( ಪ್ರೊ. ಎಸ್. ಬಿ. ಪುಣೇಕರ, ಎಂ.ಎ ):— ಇಂಗ್ಲಿಷ ಪ್ರಾಧ್ಯಾಪಕರು, ಲಿಂಗರಾಜ ಕಾಲೇಜ ಬೆಳಗಾವಿ; ಕಾಲೇಜಿನಲ್ಲಿದ್ದ ಅವಧಿ ಸುಮಾರು ೧೯೪೭-೫೧; ಪ್ರಸ್ತುತ ಕವನಗಳ ರಚನೆ ೧೯೪೭ರ ಈಚೆಗೆ.

ಶ್ರೀ. ರುದ್ರ ( ಶ್ರೀ. ಆರ್. ಸಿ. ಭೂಸನೂರಮಠ, ಬಿ. ಎ. ):— ಪ್ರೋಗ್ರಾಂ ಅಸಿಸ್ಟಂಟ, ಬಾನುಲಿ ಕೇಂದ್ರ, ಧಾರವಾಡ. ಜ.ದಿ. ೧೧-೧೧-೧೯೨೪; ಕಾಲೇಜಿನಲ್ಲಿದ್ದ ಅವಧಿ ೧೯೪೫-೪೯; ಪ್ರಸ್ತುತ ಕವನ ರಚನೆ ೧೯೫೦ರಲ್ಲಿ.

ಶ್ರೀ. ಶಾಂತಿನಾಥ ದೇಸಾಯಿ, ಎಂ. ಎ. :— ಇಂಗ್ಲಿಷ ಪ್ರಾಧ್ಯಾಪಕರು, ವಿಲ್ಸನ್ ಕಾಲೇಜ, ಮುಂಬಯಿ. ಜ. ದಿ. ೧೩-೭-೧೯೨೯; ಕಾಲೇಜಿನಲ್ಲಿದ ಅವಧಿ ೧೯೪೫-೪೮; ಪ್ರಸ್ತುತ ಕವನಗಳ ರಚನೆ ( ೧ ) ೧೯೫೩ ( ೨ ) ೧೯೫೪.

ಶ್ರೀ. ವಸಂತ ಕವಲಿ, ಎಂ. ಎ. :— ಇಂಗ್ಲಿಷ ಟ್ಯೂಟರ, ಸಿದ್ಧಾರ್ಥ ಕಾಲೇಜ, ಮುಂಬಯಿ. ಜ. ದಿ. ೧೪-೪-೧೯೩೦; ಕಾಲೇಜಿನಲ್ಲಿದ್ದ ಅವಧಿ ೧೯೪೬-೫೨; ಪ್ರಸ್ತುತ ಕವನ ರಚನೆ ೧೯೫೦.

ಶ್ರೀ. ಕೀರ್ತಿನಾಥ ( ಶ್ರೀ. ಕೆ. ಡಿ. ಕುರ್ತಕೋಟಿ, ಬಿ. ಎ. ) :— ಶಿಕ್ಷಕರು, ವಿದ್ಯಾದಾನ ಸಮಿತಿ ಹಾಯಸ್ಕೂಲ, ಗದಗ. ಜ. ದಿ. ೨೩-೧೧-೧೯೨೮; ಕಾಲೇಜಿನಲ್ಲಿದ್ದ ಅವಧಿ ೧೯೪೬-೫೦; ಪ್ರಸ್ತುತ ಕವನ ರಚನೆ ೧೯೫೦ರಲ್ಲಿ.

ಶ್ರೀ. ಸೂರ್ಯ ಅವಧಾನಿ, ಬಿ. ಎ. :— ವಿದ್ಯಾರ್ಥಿ, ಸ್ಕೂಲ್ ಆಫ್ ಎಕೊನಾಮಿಕ್ಸ್, ಮುಂಬಯಿ. ಕಾಲೇಜಿನಲ್ಲಿದ್ದ ಅವಧಿ ೧೯೪೯-೫೩; ಪ್ರಸ್ತುತ ಕವನ ರಚನೆ ೧೯೫೨ರಲ್ಲಿ ( ಕಾಲೇಜಿನ ಮಿವಲೆನಿಯಿಂದ ).

ಶ್ರೀ. ವ್ಹಿ. ಎಚ್. ದೇಸಾಯಿ, ಬಿ.ಎ.:—ಎಂ.ಎ. ವಿದ್ಯಾರ್ಥಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಜ.ದಿ. ೩-೧೧-೧೯೩೨; ಕಾಲೇಜಿನಲ್ಲಿದ್ದ ಅವಧಿ ೧೯೫೩-೫೪; ಪ್ರಸ್ತುತ ಕವನ ರಚನೆ ೧೯೫೦ರಲ್ಲಿ ( ಕಾಲೇಜಿನ ಮಿವಲೆನಿಯಿಂದ).

ಶ್ರೀ. ಖಾಸನೀಸ ರಾಘವೇಂದ್ರ, ಬಿ.ಎ..— ಎ. ಎ. ವಿದ್ಯಾರ್ಥಿ, ಎಲ ಫಿನ್‌ಸ್ಟನ್ ಕಾಲೇಜ, ಮುಂಬಯಿ. ಜ. ದಿ. ೨-೩-೧೯೩೩; ಕಾಲೇಜಿನಲ್ಲಿದ್ದ ಅವಧಿ ೧೯೫೦-೫೪; ಪ್ರಸ್ತುತ ಕವನ ರಚನೆ ೧೯೫೪.

ಶ್ರೀ. ಎಲ್. ಬಿ. ಪಾಟೀಲ-ಕುಲಕರ್ಣಿ :— ಇಂಗ್ಲಿಷ ಪ್ರಾಧ್ಯಾಪಕರು, ಕರ್ನಾಟಕ ಕಾಲೇಜ, ಧಾರವಾಡ; ಜ. ದಿ. ೧೯-೭-೧೯೨೭; ಕಾಲೇಜಿನಲ್ಲಿದ್ದ ಅವಧಿ ೧೯೪೯-೫೩; ಪ್ರಸ್ತುತ ಕವನ ರಚನೆ ೧೯೫೪ರಲ್ಲಿ.

ಶ್ರೀ. ಜಿ. ಎಸ್. ಹೆಗಡೆ, ಬಿ. ಎ. :— ವಿದ್ಯಾರ್ಥಿ, ಲಾ ಕಾಲೇಜ, ಮುಂಬಯಿ. ಜ. ದಿ. ೧-೧-೧೯೩೧; ಕಾಲೇಜಿನಲ್ಲಿದ್ದ ಅವಧಿ ೧೯೫ —೫೪; ಪ್ರಸ್ತುತ ಕವನ ರಚನೆ ೧೯೫೩ರಲ್ಲಿ.

---

# ಪ್ರಕಾಶಕರ ಮಾತು

ಪ್ರಿ. ವಿ. ಕೃ. ಗೋಕಾಕರ ಪ್ರೋತ್ಸಾಹ ಮತ್ತು ಪ್ರೇರಣೆಗಳಿಂದ ಕರ್ನಾಟಕ ಸಂಘದ ಒಂದು ಅಂಗವಾಗಿ ಬೆಳೆದು ಬಂದಿರುವ **ಕಮಲ ಮಂಡಲವು** ತನ್ನ ಕಾರ್ಯಕ್ಷೇತ್ರವನ್ನು ಸಾಹಿತ್ಯ ಚರ್ಚೆಗಳಿಗೆ ಮಾತ್ರ ಪರಿಮಿತಗೊಳಿಸದೆ ಇದೀಗ ಪ್ರಕಾಶನಕಾರ್ಯವನ್ನು ಕೈಕೊಂಡುದು ಸಂಘದ ಸದಸ್ಯರು ಅಭಿಮಾನ ಪಡುವ ಸಂಗತಿಯಾಗಿದೆ. ದಿ. ಪ್ರೊ. ಎ. ಟಿ. ಸಾಸನೂರರ ಕಾಲದಲ್ಲಿ ಸಂಘವು **ಅಭಿನವಪಂಪ** ಮತ್ತು **ಸಾಹಿತ್ಯದ ಗುಟ್ಟು** ಎಂಬೆರಡು ವಿಮರ್ಶನ ಗ್ರಂಥಗಳನ್ನು ಪ್ರಕಟಿಸಿತ್ತು. ಆನಂತರದಲ್ಲಿ-ಸುಮಾರು ಇಪ್ಪತ್ತು ವರುಷಗಳತರುವಾಯ ಇದೀಗ '**ವಂಶವೃಕ್ಷ**' ಕವನಸಂಗ್ರಹವು ಪ್ರಕಟವಾಗಿದೆ. ಅನಿವಾರ್ಯ ಅಡಚಣೆಗಳಿಂದ ನಿಂತುಹೋಗಿದ್ದ ಪ್ರಕಾಶನ ಕಾರ್ಯವು ತಡವಾಗಿದ್ದರೂ ಪುನರುಜ್ಜೀವನಗೊಂಡುದು ಸಂಘದ ಚರಿತ್ರೆಯಲ್ಲಿ ಒಂದು ಹೊಸ ಹೆಜ್ಜೆಯೇ ಸರಿ. ಕಳೆದ ಕೆಲ ವರುಷಗಳಿಂದ ಕನಸಾಗಿಯೇ ಉಳಿದಿದ್ದ ಈ ಕಾರ್ಯವನ್ನು ನನಸಾಗಿಸಿದ್ದ ಶ್ರೇಯಸ್ಸು ಈ ಸಲದ ಸಂಘದ ಉತ್ಸಾಹೀ ಕಾರ್ಯಕಾರೀ ಮಂಡಲದ ಸದಸ್ಯರದಾಗಿದೆ.

'**ವಂಶವೃಕ್ಷ**' ವು ಕರ್ನಾಟಕ ಸಂಘದ ಇಂದಿನ ಮತ್ತು ಹಿಂದಿನ ಸದಸ್ಯರಿಂದ ರಚಿತವಾದ ಕವನಗಳ ಸಂಗ್ರಹ. ಈ ಪುಸ್ತಕದ ಹೊಳವು ಹಾಕುವ ಮೊದಲು ಸಂಘದ ಹಿಂದಿನ ಸದಸ್ಯರ ಸಮರ್ಪಕ ಯಾದಿಯೊಂದನ್ನು ಸಿದ್ಧಪಡಿಸಬೇಕಾಯಿತು. ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಸಂಘದ ಆಶ್ರಯದಲ್ಲಿ ಕವಿತಾರಚನೆಯ ಕಲೆಯನ್ನೂ ಸಾಹಿತ್ಯಾಭಿರುಚಿಯನ್ನೂ ಬೆಳೆಸಿಕೊಂಡು ಅದನ್ನು ಇಂದಿನ ವರೆಗೂ ಕಾಯ್ದುಕೊಂಡು ಬಂದಿರುವ ಮಹನೀಯರ ಹೆಸರುಗಳನ್ನು ಹಲವಾರು ಮಿತ್ರರ ಸಹಾಯದಿಂದ ಈ ಯಾದಿಯಲ್ಲಿ ಸೇರಿಸಲಾಯಿತು. ಕಾಲೇಜಿನ ಆರಂಭದಿಂದ ಈ ವರೆಗಿನ ಉಪಲಬ್ಧವಿದ್ದ ಕಾಲೇಜ ಮಿಸೆಲನಿಗಳನ್ನೂ ಇದಕ್ಕಾಗಿ ಉಪಯೋಗಿಸಬೇಕಾಯಿತು. ಆದರೂ ಸುಮಾರು ಮೂವತ್ತೈದು ವರುಷಗಳ ಸುದೀರ್ಘ ಕಾಲಾವಧಿಯಲ್ಲಿ ಈ ಕಾಲೇಜಿನಿಂದ ಸ್ಫೂರ್ತಿ ಪಡೆದು ಹೋದ ಸಕಲ ಕವಿಗಳ ಯಾದಿಯನ್ನು ತಯಾರಿಸುವುದು ಬಹು ದುಸ್ತರದ ಕೆಲಸ. ಕೆಲವು ತಪ್ಪುತಡೆಗಳುಂಟಾಗುವುದು

ಸಹಜವಾಗಿದ್ದರೂ ಕಾಲೇಜಿನ ಆರಂಭದಿಂದ ಇಂದಿನ ವರೆಗಿನ ನಾಲ್ಕೂ ದಶಕಗಳನ್ನು ಪ್ರತಿನಿಧೀಕರಿಸುವಂತೆ ಯಾದಿಯೊಂದು ಸಿದ್ಧವಾಯಿತು. ಆ ನಂತರ ಈ ಹಳೆಯ ಸದಸ್ಯರೊಂದಿಗೆ ಪತ್ರವ್ಯವಹಾರ ನಡೆಸಿ ೧೯೪೭ರ ಈಚೆಗೆ ರಚಿತವಾದ ತಮ್ಮ ಎರಡೆರಡು ಕವನಗಳನ್ನು ಕಳಿಸುವುದಾಗಿ ಅವರನ್ನು ಬಿನ್ನವಿಸಲಾಯಿತು. ಹಲವರಿಂದ ಕವನಗಳು ಬಂದವು; ಕೆಲವರ ಕವನಗಳನ್ನು ಕಾಲೇಜಿನ ಮಿಸೆಲನಿಯ ಸಂಚಿಕೆಗಳಿಂದ ಎತ್ತಿಕೊಳ್ಳಬೇಕಾಯಿತು. ಈ ಎಲ್ಲ ಕವನಗಳನ್ನು ಸಲಹೆಗಾರರ ಸಮಿತಿಯ ಮುಂದಿಟ್ಟು ಸಮಿತಿಯ ಸದಸ್ಯರಿಂದ ಆಯ್ಕೆಹೊಂದಿದ ಕವನಗಳನ್ನು ಕಾಲಾನುಕ್ರಮದಲ್ಲಿ ಸೇರಿಸಿ ಈ ಸಂಗ್ರಹವನ್ನು ಸಿದ್ಧಪಡಿಸಲಾಯಿತು. ಉತ್ತರ ಕರ್ನಾಟಕದಲ್ಲಿ ಕಳೆದ ಮೂವತ್ತೈದು ವರುಷಗಳ ಅವಧಿಯಲ್ಲಿ ಕಾಲಕಾಲಕ್ಕೆ ಮಾರ್ಪಡುತ್ತ ಬಂದ ಕಾವ್ಯಪಥದ ವಿವಿಧ ಲಕ್ಷಣಗಳಿಗೆ ಆಳವಡುವಂತಹ ಕವನಗಳ ಆಯ್ಕೆಯ ಕ್ರಮವೊಂದನ್ನು ಇಲ್ಲಿ ಅನುಸರಿಸಲಾಗಿರುವದು. ಈ ಸಂಗ್ರಹದಲ್ಲಿ ಒಟ್ಟು ಐವತ್ತೆರಡು ಕವಿಗಳ ಕವನಗಳು ಪ್ರಸಿದ್ಧವಾಗಿವೆ. ಒಟ್ಟು ಕವನಗಳ ಸಂಖ್ಯೆ ಅರುವತ್ತೇಳು. ಇವುಗಳಲ್ಲಿ ಸುಮಾರು ನಲುವತ್ತೈದರಷ್ಟು ಸ್ವಾತಂತ್ರ್ಯೋತ್ತರ ಕವನಗಳಿರುವುದು ಈ ಕವನಸಂಗ್ರಹದ ವೈಶಿಷ್ಟ್ಯ.

ಈ ಕವನಸಂಗ್ರಹಕ್ಕೆ ಕವಿತೆಗಳನ್ನು ಒದಗಿಸಿದ ಸಂಘದ ಹಿಂದಿನ ಸದಸ್ಯರ ಸಂಕ್ಷಿಪ್ತ ಪರಿಚಯವನ್ನು ಆಯಾ ಕವಿಗಳಿಂದ ಮತ್ತು ಅವರ ಪರಿಚಿತರಿಂದ ಉಪಲಬ್ಧವಿದ್ದಷ್ಟು ಸಂಗ್ರಹಿಸಿ ಬೇರೆಡೆ ಪ್ರಕಟಿಸಲಾಗಿದೆ. ಸ್ಥಳಾಭಾವದ ಮೂಲಕ ಆವಶ್ಯಕ ವಿವರಗಳನ್ನಷ್ಟೇ ಇಲ್ಲಿ ಕೊಡಲಾಗಿದೆ. ಸಂಘದ ಇಂದಿನ ಸದಸ್ಯರು ಇನ್ನೂ ಕಾಲೇಜಿನ ವಿದ್ಯಾರ್ಥಿಗಳಾಗಿದ್ದು ಅವರ ವರ್ಗವನ್ನು ಅವರವರ ಹೆಸರಿನೊಂದಿಗೆ ಸೂಚಿಸಲಾಗಿದೆ. ಈ ಪುಸ್ತಕಕ್ಕೆ ಕವಿತೆಗಳನ್ನು ಕಳಿಸಿ ಸಹಕರಿಸಿದ ಸಂಘದ ಈ ಎಲ್ಲ ಇಂದಿನ ಮತ್ತು ಹಿಂದಿನ ಸದಸ್ಯರಿಗೆ ಹಾರ್ದಿಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**'ವಂಶವೃಕ್ಷ'** ದ ಪ್ರಕಟನಾ ಸಮಾರಂಭವು ಇದೇ ನವ್ಹೆಂಬರ ತಿಂಗಳು ದಿ. ೧೪ ರಂದು ಉತ್ತರ ಕರ್ನಾಟಕದ ಉದಾತ್ತ ಕವಿಗಳೆಂದು ಹೆಸರಾಂತ ಕವಿವರ್ಯ ಶ್ರೀ. ಅಂಬಿಕಾತನಯದತ್ತರ ಅಮೃತ ಹಸ್ತದಿಂದ ಜರುಗಿತು. ಈ ವಂಶವೃಕ್ಷಕ್ಕೆ ಮೂಲಾಧಾರರಂತಿರುವ ಈ ವರಕವಿಗಳಿಗೆ ಈ ಕವನಸಂಗ್ರಹವನ್ನು

ಪ್ರೀತಿಯಿಂದ ಸಮರ್ಪಿಸಲಾಗಿದೆ. **ಕಮಲಮಂಡಲದ** ಪ್ರಕಾಶನ ಸಮಾರಂಭ ವನ್ನು ನೆರವೇರಿಸಿ, ಸಂಘದ ಈ ಮುಡಿಪನ್ನು ಸ್ವೀಕರಿಸಿ, ಈ ವಂಶವೃಕ್ಷದ ಭವಿಷ್ಯವು ಉಜ್ವಲವಾಗಲೆಂದು ತಮ್ಮ ಪ್ರಾಸಾದಿಕ ಕಾವ್ಯವಾಣಿಯಿಂದ ಹರಕೆಯಿತ್ತು ಹುರಿದುಂಬಿಸಿದ ಶ್ರೀ. ಅಂಬಿಕಾತನಯದತ್ತರಿಗೆ ಸಂಘದ ಸಕಲ ಸದಸ್ಯರ ಪರವಾಗಿ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕವನ ಸಂಗ್ರಹದ ಕಲ್ಪನೆಯ ಮೂಲ ಪ್ರವರ್ತಕರಾಗಿ, ಇದಕ್ಕೆ ಅರ್ಥ ಪೂರ್ಣವಾದ ಹೆಸರನ್ನು ಸೂಚಿಸಿ, ಉದ್ಬೋಧಕವಾದ ಪೀಠಿಕೆಯನ್ನು ಬರೆದು, ಈ ಪುಸ್ತಕದ ಗೌರವವನ್ನು ಹೆಚ್ಚಿಸಿದ ಪ್ರಿ. ವಿ. ಕೃ. ಗೋಕಾಕರ ಉಪಕಾರ ವನ್ನು ಅತ್ಯಂತ ಕೃತಜ್ಞತಾಭಾವದಿಂದ ಸ್ಮರಿಸುತ್ತೇನೆ. ಮತ್ತು ಕರ್ನಾಟಕ ಸಂಘದ ಎಲ್ಲ ಕಾರ್ಯಕಲಾಪಗಳಲ್ಲಿ--ವಿಶೇಷವಾಗಿ ಪುಸ್ತಕ ಪ್ರಕಟನೆಯ ಕಾರ್ಯದಲ್ಲಿ ಆಗಾಗ ಸೂಕ್ತ ಸಲಹೆಸೂಚನೆಗಳನ್ನಿತ್ತು ಹಲವಿಧದಲ್ಲಿ ನೆರವನ್ನು ನೀಡಿದ್ದ ಪ್ರೊ. ಎಸ್. ಎಸ್. ಮಾಳವಾಡ ಅವರಿಗೆ ನಾನು ತುಂಬಾ ಆಭಾರಿ ಯಾಗಿದ್ದೇನೆ.

ಮತ್ತು ಸಂಘದ ಕಾರ್ಯಕಲಾಪಗಳನ್ನು ಮೆಚ್ಚಿ ಈ ಪ್ರಕಟನೆಯ ಕಾರ್ಯಕ್ಕೆ ಸಕಾಲದಲ್ಲಿ ಆವಶ್ಯಕ ಧನಸಹಾಯವಿತ್ತು ಪ್ರೋತ್ಸಾಹಿಸಿದ ಕಾಲೇಜ ಯೂನಿಯನ್ನಿನ ಎಲ್ಲ ಸದಸ್ಯರಿಗೆ ಸಂಘವು ಚಿರಋಣಿಯಾಗಿದೆ. ಅಲ್ಲದೆ ಈ ಪುಸ್ತಕದ ಪ್ರಕಟನಾ ಕಾರ್ಯದಲ್ಲಿ ಮೊದಲಿನಿಂದ ಕೊನೆಯವರೆಗೂ ಎಲ್ಲ ವಿವ ರಗಳಲ್ಲೂ ಶ್ರಮವಹಿಸಿ ಸಹಕರಿಸಿದ ಸಂಘದ ಗೌ. ಕಾರ್ಯದರ್ಶಿ ಶ್ರೀ|| ಜಿನದತ್ತ ದೇಸಾಯಿ ಮತ್ತು ಕಮಲಮಂಡಲ ಪ್ರಕಾಶನದ ಗೌ. ಕಾರ್ಯದರ್ಶಿ ಶ್ರೀ|| ಲಕ್ಷ್ಮಣ ಬಾಪಟ ಅವರನ್ನು ನಾನು ಹೃತ್ಪೂರ್ವಕ ಅಭಿನಂದಿಸುತ್ತೇನೆ.

ಕೊನೆಯಲ್ಲಿ, ಈ ಪುಸ್ತಕವನ್ನು ಅಲ್ಪಾವಧಿಯಲ್ಲಿ ಅಂದವಾಗಿಯೂ ಅಚ್ಚು ಕಟ್ಟಾಗಿಯೂ ಮುದ್ರಿಸಿ ತಯಾರಿಸಿಕೊಟ್ಟ ಪ್ರತಿಭಾ ಮುದ್ರಣಾಲಯದ ಒಡೆಯ ರಾದ ಶ್ರೀ|| ಭಾಲಚಂದ್ರ ಘಾಣೇಕರ ಅವರಿಗೆ ಕರ್ನಾಟಕ ಸಂಘವು ಉಪಕೃತ ವಾಗಿದೆ.

**ಎಸ್. ಆರ್. ಮಳಗಿ.**

ತಾ|| ೨೭–೧೧–೧೯೫೪.

ಕಾರ್ಯಾಧ್ಯಕ್ಷ, ಕರ್ನಾಟಕ ಸಂಘ
ಕರ್ನಾಟಕ ಕಾಲೇಜ, ಧಾರವಾಡ.

# ಪರಿವಿಡಿ

# ಒಪ್ಪೋಲೆ

| ಪುಟ. | ಸಾಲು | ತಪ್ಪು | ಒಪ್ಪು |
|---|---|---|---|
| ೫೩ | ೮ | ಸೃಷ್ಟಿ | ಸೃಷ್ಟಿ |
| ೫೭ | ೧೩ | ಹುಣ್ಣಿವೆಗೊಪ್ಮೆ | ಹುಣಿವೆಗೊಮ್ಮೆ |
| ೬೦ | ೯ | ಬೆಟ್ವ ಬೆಟ್ವ | ಬೆಟ್ಟಬೆಟ್ಟ |
| ೬೧ | ೮ | ಆಲೆ | ಅಲೆ |
| ೭೨ | ೪ | ಪರ್ವತನವು | ಪರ್ವತವು |
| ೭೩ | ೧೨ | ಏಲೆ | ಎಲೆ |
| ೭೭ | ೧೦ | ಕಳೆಕ | ಕಳೆದ |
| ೮೪ | ೧೨ | ದೀಶಕ್ತಿ | ಧೀಶಕ್ತಿ |
| ೮೯ | ೧೫ | ನಲ್ಲ ನಲ್ಲ ! | ನನ್ನನಲ್ಲ |
| ೮೯ | ೧೬ | ನಲ್ಲದೆಲೆಯಲಿ | ನಲ್ಲನೆದೆಯಲಿ |
| ೯೫ | ೧೪ | ಬೀರುತಿವೆ. | ಬೀರುತಿವೆ, |
| ೯೭ | ೪ | ಕೊಡೆದೆರೆನಗೀ | ಕೊಡದಿರೆನಗೀ |
| ೧೦೦ | ೮ | ಕಾಮದೇನುವು | ಕಾಮಧೇನುವು |
| ೧೦೦ | ೧೦ | ಜ್ಯೂ. ಬಿ. ಎ. | ಬಿ. ಎ. |
| ೧೦೧ | ೪ | ಹಿಡಿಯಲೆಳಿಸಿದೆ | ಹಿಡಿಯಲೆಳಸಿದೆ |

ಪೀಠಿಕೆಯಲ್ಲಿ ಪುಟ ೯, ೧೦ರಲ್ಲಿ ಪುಟದ ಅಂಕಿಗಳು ಮಾತ್ರ ತಪ್ಪಾಗಿ ಬದ್ದಿವೆ.

# ಕರ್ನಾಟಕ ಸಂಘದ ಕಾರ್ಯಕಾರಿ ಮಂಡಲ

೧೯೫೪—೫೫

ಅಧ್ಯಕ್ಷರು:—— ಪ್ರಿ. ವಿ. ಕೃ. ಗೋಕಾಕ ಎಂ. ಎ. (ಆಕ್ಸನ್)
ಕಾರ್ಯಾಧ್ಯಕ್ಷರು:—— ಪ್ರೊ. ಎಸ್. ಆರ್. ಮಳಗಿ. ಎಂ. ಎ., ಬಿ. ಟಿ.

## ಸದಸ್ಯರು

೧. ದೇಸಾಯಿ. ಜೆ. ಎಸ್. Sr. B. A. (ಗೌರವ ಕಾರ್ಯದರ್ಶಿ)
೨. ಕುಲಕರ್ಣಿ ಜಿ. ಆರ್. Jr. B. Sc. (ಭಂಡಾರಿಗ)
೩. ಬಾಪಟ. ಎಲ್. ಆರ್. I. A. (ಪ್ರಕಟನಾ ಕಾರ್ಯದರ್ಶಿ)
೪. ಮಳಿಯಪ್ಪಗೌಡರ. ಎಚ್. ಎಸ್. Jr. B. A. (ಕಮಲಮಂಡಲ ಕಾರ್ಯದರ್ಶಿ)
೫. ಗುಂಡುರಾವ. ವ್ಹಿ. ಬಿ. Sr. M. Sc.
೬. ಬಡಿಗೇರ. ಜೆ. ಎನ್. Sr. B. Sc.
೭. ಉಕ್ಕಡಗಾತ್ರಿ. ಎಸ್. ಕೆ. I. Sc.
೮. ಪಾಟೀಲ. ಎನ್. ಎಸ್. F. Y. A.
೯. ಹೊಸಪೇಟಮಠ. ಜಿ. ಆರ್. F. Y. Sc.
೧೦. ಕು. ಸುಲೋಚನಾ. ಬೆಂಗೇರಿ. Jr. B. A. (ವಿದ್ಯಾರ್ಥಿನಿಯರ ಪ್ರತಿನಿಧಿ)

---



---

# ಕುರುಡ ಹುಡುಗ * * *

೧

ಬೆಳಕು ಬೆಳಕೆಂದುಸುರುತಿರುವಿರಿ
ಬೆಳಕದೆಂತಹ ಭವ್ಯ ವಸ್ತುವು
ಬೆಳಕಿನಾಸುಖವನ್ನು ಪೇಳಿರಿ ಕುರುಡನಾದೆನಗೆ;

ಪೊಳೆಯುವಚ್ಚರಿ ವಸ್ತುಗಳುಮಾ-
ಪೊಳೆವ ಸೂರ್ಯನ ನೋಡುವವರೇ
ಪೊಳೆವನವನೆಂತುಂಟುಮಾಡುತ ಹಗಲು ರಾತ್ರಿಗಳ ?

೨

ನಾನು ಮಲಗಲು ರಾತ್ರಿಯಹುದೈ
ನಾನು ಕ್ರೀಡಿಸೆ ಹಗಲದಪ್ಪುದು
ನಾನದಾವಗಮೆಚ್ಚರಿದ್ದಡೆ ಸತತ ಹಗಲೆನಗೆ;

ನಾನು ದುರ್ಭಗನೇಕೆ ಪೇಳಿರಿ !
ನಾನು ತಾಳ್ಮೆಯ ಬಲದಿ ಸಹಿಪೆಂ
ನಾನದೆಂತುಂ ತಿಳಿಯದಾ ಹಾನಿಯನು ಮುದದಿಂದ.

೩

ಎನಗಂ ಸಿಗದಾ ವಸ್ತುವು ।
ಮನದಾ ತೋಷವನದೆಂದಿಗಪಹರಿಸಲು ಬೇ- ॥
ಡೆನುತಿಂತು ಪಾಡುತಂ ನಾ- ।
ನನವರತಂ ರಾಜನಂಧನಾದಡದೇನು ! ॥

—ಎಂ. ಎಸ್. ಅಂಕಲಕೋಟಿ

# ಹಂಬಲದ ಕಂಬನಿಗಳು * * *

೧

ವಾಡಿಕೆಯ ಹಾಡಿಕೆಯ ಕೇಳಿ ಕಿವಿ ಕಿವುಡಾಯ್ತು
ವಾಡಿಕೆಯ ನೋಡಿಕೆಯ ನೋಡಿ ಕಣ್ಕುರುಡಾಯ್ತು
ವಾಡಿಕೆಯ ಮಾಡಿಕೆಯ ಮಾಡುವೀ ನಾಡಿನಲಿ ಬಾಳಿಕೆಯು ಬೇಡವಾಯ್ತು.

ಅರಸನರಮನೆ ಕಟ್ಟಿ ಕಲಶವಿಡುವುದ ಬಿಟ್ಟು
ಹರಿಯುವಿರುವೆಗಳಂತೆ ಹುತ್ತ ಕಟ್ಟುತ್ತಿಹರು
ಸಿರಿಮನೆಯು ಸೆರೆಮನೆಯು,—ಕಳೆನಾಡು ಕಗ್ಗಾಡು,—ಬೆಳೆಬೀಡು ಗೂಗೆ ಗೂಡು!

೨

ಭೀಮರೂಪವ ಧರಿಸಿ ಹೆಣದ ಹಾಸಿಗೆ ಹಾಸಿ
ಮಾಸುಸಕದಿಂ ಮಾರಿಯುರಿಮುನಿದು ಹಾಡುವಳು
ಈ ಮಾಸುಮಲದ ಮುಸಣದ ಮುಸಕು ಮುಸಿಯನ್ನು ಮುಸುಕಿಸುವನಾವನಿಲ್ಲೀ?

ನಾಡಿನಾವಿನ ಕೆಚ್ಚಲಿನ ಕೆಚ್ಚು ಬರಿದಾಯ್ತು
ಹಾಡುತೆನೆ ಹಾಳಾಗಿ ಹಾಲಿಲ್ಲದಲೆ ಹೋಯ್ತು
ಬೇಡ ಬೇಡೀ ಬಡಕ ಬಡತನದ ಬಾಡಿಕೆಯು ಬೇಡಿಕೆಯ ಬಿರಿಯ ಬರವು !

—ರಾಮಚಂದ್ರ

## ಬಾಳು ಹಾಳು * * * *

೧

ನನ್ನದಿದ್ದುದನೆಲ್ಲ
ನಿನ್ನೊಳಿರಿಸಿದೆ ಕಂದ!
ಕಣ್ಣಿಗೆರವಾಗಿ ನೀ ಪೋದುದೆಲ್ಲಿ?
ಚೆನ್ನಿಗನೆ, ಇನಿದಾದ
ನಿನ್ನ ಸುಸ್ವರವ ನೀ-
ಗಿನ್ನೆನ್ನ ಸೇವಿಸುವರಾರು ಜಗದಿ ?

೨

ಹೊರಗಿನಿಂದಾಂಬರಲು
ಬರುತ ಬಾಗಿಲದೆಡೆಗೆ
ಎರಡು ಕೈಗಳನೆತ್ತಿ ನಲಿಯುತಿರ್ದೆ;
ಬರಲೀಗ ಮನೆ ಬಯಲು
ಕರಲು ಭೂಮಿಯು ಮನವು
ಹೊರದೂಡಿದಂತಾಗಿ ಮೂಢನಿರುವೆ.

೩

ಜನುಮಿಸೆನ್ನೊಳು ಸೌಖ್ಯ
ವನುಭವಿಸಲಿಲ್ಲ ನೀ-
ನೆನಗಾಗಿ ದುಃಖವನು ಬಿತ್ತಿಬಿಟ್ಟೆ !
ಕುಣಿದಾಟವೆಲ್ಲಿಹುದು ?
ಇನಿದಾದ ಸ್ವರವೆಲ್ಲಿ ?
ವನದೊಳಿರುತಿರ್ದ ತೆರನಾಗಿ ಕುಳಿತೆ !

೪

ನಿನ್ನ ಕಳಿಸಿದರಾರು
ಬನ್ನ ಬಡಲೀ ಭವದಿ ?
ಮುನ್ನಗಾಣವೆ ಬಂದೆಯೇಕೆ ಬರಿದೆ ?
ಬನ್ನ ಬಡುತಿರಲು ನೀ-
ನಿನ್ನು ಬಳಿಗಿಲ್ಲದಲೆ,
ನನ್ನ ಬಾಳದು ಹಾಳು,—ಪೇಳಲೇನು ?

೫

ನಿನ್ನಿಂದೆ ಕುಲವೃಕ್ಷ
ಚೆನ್ನಾಗಿ ಬೆಳೆಯುತಿರ-
ಲಿನ್ನು ನಿನ್ನನು ನಡುವೆ ತಡೆದರಾರು ?
ಬನ್ನಬಡುತಿಹೆ, ಮುಂದೆ
ಎನ್ನನುದ್ಧರಿಪರಾ-
ರಿನ್ನು ಜಗದೊಳು ನಿನ್ನನುಳಿದು ಕಂದ ?

೬

ಹರಿಯೆ, ನೀನೆನಗಿತ್ತ
ವರವ ಕಸಿಯುವದೇಕೆ ?
ಕರುಣಸಾಗರನೆಂದು ಕರೆವುದೇಕೆ ?
ಪರಮ ಪಾವನ ಮೂರ್ತಿ !
ಶರಣೆಂಬೆನೆಚ್ಚರಿಸು,
ಹರಿದೊಗೆದು ಮಾಯೆಯನ್ನುದ್ಧರಿಪುದು.

**—ಎನ್. ವ್ಹಿ. ಕುಲಕರ್ಣಿ**

ತಾಳ * * * *

೧

ತಾಳು ತಾಳು ತಾಳಿ ಬಾಳು
ತಾಳ ಹಿಡಿದು ನಡೆದು ಬಾಳು
ತಾಳದೊಡನೆ ಪದವನಿಡಲು ಸ್ವರ್ಗಜೀವನ !
ತಾಳದಪ್ಪಿ ತಂತಿ ಹರಿಯೆ
ತಾಳ-ಮೇಳವಿಲ್ಲವಾಗೆ
ತಾಳಗೆಟ್ಟ ಬಾಳು ಅದುವೆ ನರಕಜೀವನ !

೨

ತಾಳ ತಂತಿ ಮೇಳವಾಗೆ
ಬಾಳನಾವೆ ತೇಲುತಿಹುದು
ತಾಳದಲ್ಲಿ ಲೀನವಾಗೆ ಮಧುರಗೀತವು !
ತಾಳದಲ್ಲಿ ಬೆರೆಯಲಂದು
ಗೋಳು ಬದಿಗೆ ಸರಿದು ನಿಂದು
ಕಾಲವೆಲ್ಲ ಪ್ರೇಮದಲ್ಲಿ ರೂಹುಗೊಳ್ವುದು !

೩

ಸುತ್ತುಮುತ್ತು ಮೇಲು ಕೆಳಗು
ಎತ್ತ ನೋಡಿದತ್ತ ಕಡೆಗು
ಚಿತ್ತಗೊಟ್ಟು ನೋಡಲೆಲ್ಲ ತಾಲಬದ್ಧವು !
ಸತ್ಯ ಪ್ರೇಮ ಸೃಷ್ಟಿಯಲ್ಲಿ
ನಿತ್ಯವುದಿಪ ರವಿಯು ತಾರೆ
ಸತ್ಯ ಶರಣರೆಲ್ಲ ಜಗದಿ ತಾಲಬದ್ಧರು !

೪

ಸಾವು ನೋವು ಸೋಲ್ವವಲ್ಲಿ
ಭಾವ ಬಲಿತು ನಿಲ್ವುದಲ್ಲಿ
ಭಾವ ಮೀರಿ ತೋರ್ವ ಬಯಲು ತಾಲದಲ್ಲಿಯೆ !
ತೋರ್ವ ಜಗದ ತೆರವು ತೆರೆದು
ಭಾವದೇವ ಮೂರ್ತಿಗೊಂಡು
ಸರ್ವ ಜಗವೆ ನಾದಬ್ರಹ್ಮನಲ್ಲಿ ಬೆರೆವುದು !

೫

ಗಾನದಲ್ಲಿ ಲೀನವಾಗೆ
ಏನು ಎಲ್ಲ ತಾನೆಯಾಗೆ
ದೀನ ಭಾವವಳಿದು ಪೋಗೆ ಭಾವಶುದ್ಧಿಯು !
ಗಾನಲೋಲ ಶಿವನು ತಾನು
ಗಾನವಶವು ಜಗವು ಕೂಡ
ಗಾನದಲ್ಕೆ ವಿಶ್ವವೆಲ್ಲ ನಲಿಯುತಿರ್ಪುದು !

—ಎಸ್. ವ್ಹಿ. ಅಡ್ಡಣಗಿ

# ತಂಗಾಳಿ       *       *       *       *

( ಮುಕ್ತಛಂದದಲ್ಲಿ )

ತೆರೆತೆರೆಯಾಗಿ ಏರೇರಿ ಬಂದು
ಸುತ್ತುವ ಮುತ್ತುವ ತಂಗಾಳಿಯೆ!
ಬಿಸಿಲಿನ ಕುದುರೆಯೇರಿ ಸಾರಿ
ಬರಲಿರುವ ತಂಪಿನ ವೈತಾಳಿಯೆ!

ನಟ್ಟ ನಡುಬೇಸಗೆಯ ಬೆನ್ನೇರಿ
ಚಿನ್ನಾಟವಾಡುವ ಸೊಗದ ಶಿಶುವೇ!
ಬೆಳಗಿನಲಿ ಬಿಸಿಲ ಬೇಗೆಯಲಿ
ಬೈಗಿನಲಿ ಇರುಳಿನೆಲ್ಲ ಜಾವದಲಿ
ದಣಿವೆಂಬುದಿರದೆ ಸುಳಿಯುತಿರುವೆ
ಸೂಸುತಿರುವೆ ಬೀಸುತಿರುವೆ.

ಮೆಲ್ಲಮೆಲ್ಲನೆ ಬಂದು ಮಂಪ್ರದಲಿ ಸೊಲ್ಲುತ್ತ
ಸುರಿತ ಗಾಯಕಿಯಂತೆ ದನಿಯನೇರಿಸುವೆ
ಮರವ ತೂಗಿಸುವೆ ಎಲೆಯನಾಡಿಸುವೆ
ಬೇಸಗೆಯೆಂಬ ನೆನವನೂ ಓಡಿಸುವೆ
ಓ ಸವಿಯಾದ ತಂಪಿನ ತವರೇ!

ಇರುಳೆಂಥ ಸಂತ ಹೊಳೆ ನೀನು!
ನೀರೊ ಗಾಳಿಯೊ ಎಂಬ ಮಾಯೆಯ ಜನನಿ!
ಸೂಸೂಕರಿಸುತ ಸಂತತ ಅವಿರತ
ದಣಿಯದ ತಾಯಿಯ ದಯೆಯಂತೆ
ಮೈಯನು ಸುತ್ತುವೆ, ಮನವನು ಎತ್ತುವೆ
ನಿದ್ದೆಯ ಸವಿಗನಸಿನ ನಂದನವನಕೆ.

ಓ ಗಾಳಿ ! ಮುಂಗಾರಿನ ಕಾಳಿ !
ಬಂದೆಯ ತಣ್ಪಿನ ತಿರುಳನೆ ತಾಳಿ
ಬಿಸಿಲೇರಲಿ ಮೈಮನ ಬೇಯಲಿ
ನೀನಿರೆ ಜೊತೆ ನಾನೇತಕೆ ಸೋಲಲಿ ?
ಪ್ರತ್ಯಕ್ಷದ ಪರಬ್ರಹ್ಮವೆ ! ಶ್ರೀಮಾತೆಯ ವರಹಸ್ತವೆ !
ನಿನಗಿದೊ ನಮನ, ನೀನೆ ನನಗೆ ಶಮನ.

—ರಂ. ಶ್ರೀ. ಮುಗಳಿ

# ಬೇಸಗೆಯ ಹುಣ್ಣಿವೆ * * *

ಬೇಸಗೆಯ ಬೇಗುದಿಗೆ ಜೀವರ ಕಂಬನಿಗರೆದು
ಮೈ ಸೋತು ಬಸವಳಿದು ಇರಲು
ತಂಗಾಳಿ ಸೂಸುದನಿ-ಬೀಸಣಿಗೆ ಬೀಸುತಿರೆ
ಬಂದಿತಿಗೊ ಹುಣ್ಣಿವೆಯ ಇರುಳು.

ನಿರಾಳ ನೀಲದಲಿ ಪೂರ್ಣಿಮೆಯ ಚೆಲುಬಿಂಬ
ಮೆಲ್ಲಮೆಲ್ಲನೆ ಏರುತಿಹುದು
ಇಂದಿನಾ ಬೇಗುದಿಯು ಎಂದಿನಾ ಹಳಗತೆಯೊ
ಎಂಬಂತೆ ತಿರೆ ತೋರುತಿಹುದು.

ಹಗಲೆಲ್ಲ ಬೇಸಗೆಯು ಇರುಳೆಲ್ಲ ಹುಣ್ಣಿವೆಯು
ಒಂದು ಬೆಂಬತ್ತಿ ಇನ್ನೊಂದು
ಬೇಡವೆಂದರೆ ಬಿಡದು ಬೇಕು ಎಂದರೆ ಸಿಗದು
ತಾನೆ ತಾ ಸಾಗಿಹುದು ಮುಂದು.

ನನ್ನ ಜೀವನದಲ್ಲಿ ವೈಶಾಖ ಹೆಚ್ಚಿಹುದು
ಉರಿಗಾಳಿ ಸುತ್ತುಕಡೆ ತೀಡೆ
ಕೆಳೆ ಬಿಸಿಲುಗುದುರೆಯೊಲು ನೆಲವೆ ಹುರಿಹಂಚಿನೊಲು
ಆಗಿರಲು ವಿಧಿಯೆನ್ನ ಕಾಡೆ.

ವಿರಾಟ ಜೀವನದ ಪೂರ್ಣತಮ ದರ್ಶನವು
ಮೊಗದೋರಿ ಮರೆಯಾದ ಹಾಗೆ
ಅಂತು ಅರಿಯದೆ ಜೀವ ಹುರಪಳಿಸಿ ಬಲಗುಂದಿ
ಮಾಯೆಯೆಳೆದಂತೆಯೇ ಸಾಗೆ—

ಹುಣ್ಣಿವೆಯು ಬಂದರೂ ಕಣ್ಣೆವೆಯು ತೆರೆಯದಿದೆ
ಹೃದಯ ಹರುಷದಿ ಕುಣಿಯದಿಹುದು
ಉರಿಸೋಕಿನಲಿ ಚೆಲುವ ಕಂಡು ಕೆಲೆಯುವ ನೋಟ
ಕರಿದಾಗಿ ಕುಳಿಬೀಳುತಿಹುದು.

ಆದರೂ ಕೊರಗಿಲ್ಲ ತಾಳ್ಮೆ ತಳವೂರಿಹುದು
ಜೀವದಾಳದ ಶುಭ್ರತಳದಿ
ಎಲ್ಲವೂ ಒಳಿತಿಗೇ, ಸಲ್ಲುವುದು ಕಾಲಕೇ
ಎಂಬ ನಂಬಿಕೆ ನೆಲಸೆ ಮನದಿ.

ಬೇಸಗೆಯ ಹುಣ್ಣಿಮೆಯ ಬಾನ ನಡುವಂಗಣದಿ
ಚೀರಿದರು ಹಿಗ್ಗಿ ಹೀರುತಲಿ
ಚೇತನದ ಟಿಂವಕ್ಕಿ ತಿರುತಿರುಗಿ ಮೊರೆಯುತಿದೆ
ತಾಳು ತಾಳೆಂದು ಸಾರುತಲಿ.

—ರಂ. ಶ್ರೀ. ಮುಗಳಿ

# ಶ್ರೀನಿವಾಸನ ಸ್ಮಶಾನಯಾತ್ರೆಯ ಕಾಲಕ್ಕೆ—

ಮಗು— ನೋಡ ಬಾರೇ ಅವ್ವ ಹಿಂಡು ಜನರನ್ನು
ಕೂಡಿ ಇವರೆಲ್ಲರು ಸಾಗುತಿಹರೆಲ್ಲಿ ?

ನಡುವೆ ಮಂಚದ ಮೇಲೆ ಮಲಗಿದವರಾರೇ ?
ಎಡಬಲದ ಕೋಲುಗಳನೇಕೆ ಹಿಡಿದಿಹರೇ ?

ಚೆನ್ನ ಹೂಮಾಲೆಗಳ ಮೇಲೆ ಹಾಕಿಹರೆ !
ನನ್ನಂಥ ಶಾಲನ್ನೆ ಅವಗೆ ಹೊದಿಸಿಹರೆ !

ಅವಗಿರುವ ಹೆಸರೇನೆ ? ಅಜ್ಜನಂತಿಹನು ;
ಅವನಂತೆ ತಲೆಕೂಡ ಬೆಳ್ಳಗಾಗಿಹುದು.

ತಾಯಿ— ಏನು ಹೇಳಲಿ ಮಗುವೆ ಅವನ ಚರಿತವನು
ನನಗು ನಿನಗೂ ಆತ ಅನ್ನವಿತ್ತವನು.

ಅವರ ವಿದ್ಯೆಗೆ ಹಾದಿ ಮಾಡಿದವನಾತ
ಅವರ ಅನ್ನಕೆ ಪೂರ್ಣ ನೆರವಾದವನಾತ.

ಬಡಜನರ ಮನೆಗಳಿಗೆ ದೀಪವಿತ್ತವನು
ಬಡಜನರ ಒಡಲುಗಳಿಗನ್ನವಿತ್ತವನು.

ಅವನು ಅರಿಯದರಿಲ್ಲ, ಅವನನರಿಯದರಿಲ್ಲ
ಅವರ ಅಜ್ಜನ ಅಣ್ಣನೆಲ್ಲರನು ಅವ ಬಲ್ಲ.

ಮನೆತನದ ಮಾತುಗಳಿಗೆಲ್ಲ ಕಡೆ ಅವನು
ಮನೆತನದ ಕತೆಗಳೆಲ್ಲವನಿಲ್ಲದಿಲ್ಲ.

ನಮ್ಮ ನಾಡಿನ ವಿದ್ಯೆ ಅವನಿಂದ ಹಬ್ಬಿಹುದು
ನಮ್ಮೆಲ್ಲರುನ್ನತಿಯು ಅವನಿಂದ ಆಗಿಹುದು.

ಜಾತಿ ಭೇದವು ಇಲ್ಲ ಬಣದ ಭೇದವು ಇಲ್ಲ
ರೀತಿಯಲಿ ಅವನಂಥ ಮನುಜರೊಬ್ಬರು ಇಲ್ಲ.

ಆಕಾಶದಂತವನ ಹಿರಿದಾದ ಮನವು
ಚೊಕ್ಕ ಚಿಕ್ಕೆಗಳಂತೆ ಗುಣಗಳಿರುತಿಹವು.

ಮಗು— ಹಾಗಾದರೇನವನು ದೇವರೇನೇ ?
ಅಕ್ಕ ಹೇಳಿದ ಕತೆಯ ಹಾಗೆ ಇಹನು.

ತಾಯಿ— ಅಲ್ಲ ಮಗುವೇ ಅಲ್ಲ ದೇವರಲ್ಲ;
ದೇವರಿಗೆ ಬೇಕಾದ ಮನುಜನಾತ.

**—ಗಂಗಾಪ್ರಸಾದ ತಿವಾರಿ**

[ ದಿವಾಣಬಹಾದ್ದೂರ ದೊಡ್ಡ ಶ್ರೀನಿವಾಸರಾಯರ ಸ್ಮಶಾನ ಯಾತ್ರೆ ನಡೆದಾಗ ಒಬ್ಬ ಕನ್ನಡ ಶಾಲೆಯ ಶಿಕ್ಷಕನ ಹೆಂಡತಿಯ ಮತ್ತು ಮಗುವಿನ ನಡುವೆ ನಡೆದ ಕಲ್ಪಿತ ಸಂಭಾಷಣೆ. ]

# ನವೀನ ಜನನ * * *

೧

ಒಂದೊಂದು ಹುಣ್ಣಿವೆಯು
ಹೋಳಿ ಹುಣ್ಣಿವೆಯಾದರೂ
ಕಾಮದಹನ
ದುಃಸಾಧ್ಯ. ಬೂದಿಯೇ
ಬೆಳುದಿಂಗಳಿರುವ ಚೋದ್ಯ
ತೀರ ಗಹನ.

೨

ಒಂದೊದವಾವಾಸ್ಯ
ನಿಸ್ತಾರಾ ನಿಶೆಯಾದರೂ
ನಿಧಿಯು ಮನನ
ಘನ ಘೋರ:— ರವಿಚಂದ್ರ-
ತಾರಕಾಗ್ರಹಣದ ವಿನಾ,—
**ನವೀನ ಜನನ.**

—ವಿನಾಯಕ

## ನವೋದಯ * * * *

ಓ ! ತರುಣ ಎದ್ದೇಳು !
ನಿನ್ನ ಮೋರೆಯಲ್ಲಿ ಹುಮ್ಮಸ್ಸಿದೆ
ನಿನ್ನ ಕಣ್ಣಿನಲ್ಲಿ ಅಸಾಧಾರಣ ತೇಜಸ್ಸಿದೆ
ನಿನ್ನ ಹಣೆಯಲ್ಲಿ ಭವ್ಯತೆಯಿದೆ
ಗದ್ದದ ಕುಣಿಯಲ್ಲಿ ದಿವ್ಯತೆಯಿದೆ
ತುಟಿಯು ತುದಿಯಲ್ಲಿ ಆವೇಶವಿದೆ
ನಿಡಿದೋಳ್ಗಳಲ್ಲಿ ನವಖಂಡವನ್ನೆ ತೂಗುವ ಬಲವಿದೆ.
ಅಡಿಯಲ್ಲಿ ಬಿಡುಗಡೆಯಿದೆ
ಓ ತರುಣ! ಎದ್ದೇಳು !
ನಿನ್ನ ರಾಜ್ಯವಾಳು !
ಸರ್ವಮಯವಿದು ನಿನ್ನ ಸೊತ್ತು
ಸರ್ವರಿಗೆ ನೀನು ಅಡಿಯಾಳು
ಎಲ್ಲರೆದೆಯ ಹೊಂಗನಸು ನೀನು
ಎಲ್ಲ ಸ್ವರ್ಣ ಸ್ವಪ್ನದ ರಾಜ ಬೀಜ ನೀನು !
ಮನ್ವಂತರವು ಬರಲಿದೆ
ಈ ಯುಗದ ಧನ್ವಂತರಿಯಾಗು.
ಸತ್ಯಯುಗವು ಬರಲಿದೆ
ಪಾರುಪತ್ಯಗಾರನಾಗು !
ಧನುರ್ಧರ ಪಾರ್ಥನಾಗು !
ಯೋಗೀಶ್ವರ ಕೃಷ್ಣನಾಗು !
ಏಳು ! ಏಳು ! ಏಳು !
ಊದು ಕಹಳೆಯೂದು !
ಎಲ್ಲ ಅನ್ಯಾಯದೊಡನೆ ಯುದ್ಧವನ್ನು ಸಾರು
ಕಿತ್ತೊಗೆ ಎಲ್ಲ ಜಾತಿ–ಮತಗಳ ಬೇರು.
ಸನಾತನ ಸಂಕಟವನ್ನು

ವಿನೂತನ ವಿವಂಚನೆಗಳನ್ನು
ಪರಂಪರೆಯ ಪರಿಪರಿ ಯಾತನೆಗಳನ್ನು
ಎಲ್ಲವನ್ನೂ ತರಿದೊಗೆ !
ಗೆಲ್ಲಲಿ ಪ್ರೇಮ, ನಿಲ್ಲಲಿ ಹಗೆ.
ಕಾಡುದಾರಿಗಳನ್ನಳಿಸಿ
ರಾಜವೀಥಿಗಳನ್ನು ಕಟ್ಟು.
ಗಗನ ಮಹಲುಗಳನ್ನು ರಚಿಸಿ
ಮುಗಿಲನ್ನು ಮುಟ್ಟು.
ಗುಡಿಸಲುಗಳನ್ನು ಗುಡಿಚಾಪೆಗೊಳಿಸು.
ನೆಲದೆದೆಯಲ್ಲಿ ಮುಗಿಲನ್ನು ಮೂಡಿಸು !
ನೂತನ ಜಗದ ನಿರ್ಮಾತೃವಾಗು
ನವರಾಷ್ಟ್ರದ ಹರ್ಷವರ್ಧನನಾಗು !
ಸಿಡಿಲು ನಿನ್ನ ವಾಣಿಯಲ್ಲಿ
ಮಿಂಚು ನಿನ್ನ ಕೈಯಲ್ಲಿ
ಏಳು ! ಏಳು ! ಏಳು !
ಎತ್ತು ಅಭಯ ಕರವನ್ನೆತ್ತು !
ಚಕ್ರಪಾಣಿಯಾಗು !
ನೆಲದಲ್ಲಿ ಜಲದಲ್ಲಿ
ಗಾಳಿಯಲ್ಲಿ ಆಕಾಶದಲ್ಲಿ
ಸಿರಿಗಡಲಿನೊಡಲಲ್ಲಿ
ನೆಲದ ತಳಬುಡದಲ್ಲಿ
ತಾರಾಮಂಡಳದ ಸಾವಿರ ವೀಥಿಗಳಲ್ಲಿ
ಎಲ್ಲೆಡೆಗೆ ನಡೆಯಲಿ ನಿನ್ನ ಯಂತ್ರ !
ಕೇಳಿ ಬರಲಿ ನಿನ್ನ ಮಂತ್ರ !
ಪೂರ್ಣ ಜೀವನದ ಪಥಕದಲ್ಲಿ ಮಾನವನು ಮುಂದುವರಿದಿದ್ದಾನೆ.
ಅಗ್ನಿಯೇ ! ಅಮಮನೆಗೆ ನಡೆ !

ವರುಣನೇ ! ಒಕ್ಕಲಿಗನಾಗು !
ಕುಬೇರನೇ ! ನಾಡಬೊಕ್ಕಸವಾಗು !
ಇಂದ್ರನೇ ! ಕಲಾಕೇಂದ್ರವಾಗು !
ಸರಸ್ವತಿಯೇ! ವಿದ್ಯಾಗುರುವಾಗು !
ಬೃಹಸ್ಪತಿಯೇ ಮಹಾಪ್ರಧಾನನಾಗು !
ನಡೆ ! ನಡೆ ! ನಡೆ !
ಏಳು ! ಧನುಸ್ಸನ್ನು ಸಜ್ಜುಗೊಳಿಸು !
ಒಂದು ಬಾಣಕ್ಕೆ ಅಜ್ಞಾನ
ಇನ್ನೊಂದಕ್ಕೆ ದುರಭಿಮಾನ,
ಒಂದು ಟಂಕಾರಕ್ಕೆ ಅಹಂಕಾರ
ಇನ್ನೊಂದಕ್ಕೆ ದ್ವೇಷದ ಸ್ಥಾನ,
ಒಂದು ಝೇಂಕಾರಕ್ಕೆ ಜನ್ಮಾಂಧತನ
ಇನ್ನೊಂದಕ್ಕೆ ಮಂದತನ;
ಎಲ್ಲವೂ ನಿರ್ಣಯವಾಗಿ,
ಮಾನವನ ಚಿತ್ತ ಎಲ್ಲವೂ ಪರಿಶುದ್ಧ ವ್ಯೋಮವಾಗಿ
ಪ್ರಜ್ವಲಿಸುವ ಪರಂಧಾಮವಾಗಿ—
ರಾಮಚಾಪ ಸೀತೆಯನ್ನು ತಂದಂತೆ
ಗಾಂಡೀವಿಯು ದ್ರೌಪದಿಯನ್ನು ಪಡೆದಂತೆ
ಪೂರ್ಣ ಜೀವನದ ಸುಂದರಿ ಬಂದು
ಮಾಲೆ ಹಾಕಿ ಗೌರವಿಸುವಳು
ಸ್ವಯಂವರಿಸುವಳು !
ಏಳು ! ಧನುಸ್ಸನ್ನು ಸಜ್ಜುಗೊಳಿಸು !
ನೂತನ ಯುಗದ ತ್ರಿವಿಕ್ರಮನೇ !
ಮರ್ತ್ಯ-ವ್ಯೋಮ ಪಾತಾಳಗಳನ್ನು ವ್ಯಾಪಿಸಿ ನಿಲ್ಲು !
ಮನುಕುಲದ ಮಹೇಂದ್ರನೇ !
ಇಂದ್ರಚಾಪಗಳಿಂದ ಭೂ-ವ್ಯೋಮಗಳಿಗೆ ಸೇತುವೆ ಕಟ್ಟು !

ಪಂಚಪ್ರಾಣವಾದ ಪ್ರಾಣದೇವರೇ
ಅಶೋಕವನದಲ್ಲಿಯ ಮಾತೆಯನ್ನು ನಾಡಿಗೆ ತೋರಿಸು !
ಸಂಜೀವನಿಯನ್ನಾಯ್ದು ತಾ
ಓ ನನ್ನ ನಾಡ ಪುತ್ಥಳಿಯೇ !
ನನ್ನ ತಾಯ ಕಣ್ಣುಗೊಂಬೆಯೇ!
ಮಾನವ ಜಾತಿಗೆ ಬಿಟ್ಟ ಹೂವೇ !
ನೀನೇ ಯುಗಪುರುಷ
ನೀನೇ ಬರಲಿರುವ ಅವತಾರ
ನೀನೇ ಅಪೌರುಷೇಯ ಪೌರುಷ
ನೀನಲ್ಲದೆ ಅನ್ಯರಿಗೆ ಚೈತ್ಯಸುಂದರಿಯೊಲಿಯುವಳೇ ?
ಏಳು ! ಏಳು ! ಏಳು !

—ವಿನಾಯಕ

# ಬಂತು

*          ..          *          *

ಮಲ್ಲಿಗೆಗಳ ಮಧು ಋತು ಬಂತು,
ಬೆಳುದಿಂಗಳ ಸವಿದಿನ ಬಂತು,
ತೋಟದಿ ಹರೆಯದ ತೊರೆ ಬಂತು;
ನನಗೋ—
ನಲ್ಲೆಯ ನೆನಪಿನ ಕೊರೆ ಬಂತು.

ಹಕ್ಕಿಯ ಗುಂಪಿಗೆ ಚಕ್ಕಂದ,
ಹಾಡಿನ ದನಿಯಲಿ ಆನಂದ,
ಮೂಡಿರೆ ಹಿಗ್ಗಿಗೆ ಮೆರೆ ಬಂತು;
ನನಗೋ—
ನಲ್ಲೆಯ ನೆನಪಿನ ಕೊರೆ ಬಂತು.

ಕಡಲಿನ ಕರೆಯಲಿ ಸುಳಿಗಾಳಿ
ಜನಮನದಲಿ ಮಗುತನ ತಾಳಿ
ಆಡುವ ಸೊಗಸಿಗೆ ನೊರೆ ಬಂತು
ನನಗೋ—
ನಲ್ಲೆಯ ನೆನಪಿನ ಕೊರೆ ಬಂತು.

ತೆಂಗಿಗೆ ತಾಳೆಗೆ ಮಳೆಯಾಸೆ,
ಹುಣಸೆಗೆ ಹಲಸಿಗೆ ಬೆಳೆಯಾಸೆ,
ಧರೆಯಲಿ ನೆರೆತಿರೆ ಹರೆಯಿಂತು;
ನನಗೋ—
ನಲ್ಮೆಯ ನೆನಪಿನ ಕೊರೆ ಬಂತು.

ಬೇವಿಗೆ ಕಿರಿ ಹೂಗಳ ಹಾರ,
ಮಾವಿಗೆ ಹೊಸ ಬಸಿರಿನ ಭಾರ,
ತೋರಿಕೆ ಕೋರಿಕೆ ಬೆರೆದಂತು,
ನನಗೋ—
ನಲ್ಲೆಯ ನೆನಪಿನ ಕೊರೆ ಬಂತು

ಸೂರಿನ ಮರೆಯಲಿ ಪಾರಿವದ,
ಜೋಡಿಯು ನೋಟದಿ ಬೇರ್ಪರಿಪ,
ಬೇಟದಿ ಎದೆ ಹಾತೊರೆ ಬಂತು;
ನನಗೋ –
ನಲ್ಲೆಯ ನೆನಪಿನ ಕೊರೆ ಬಂತು,

ಬಯಲಿನ ಹಿಂಹೊಲದಲಿ ನೆರೆದ
ಒಗ್ಗಿನ ಸುಗ್ಗಿಯ ಸಿಂಗರದ
ಸಂತಸ ಹೃದಯದಿ ಮೆರೆದಂತು
ನನಗೋ—
ನಲ್ಲೆಯ ನೇಹದ ಮೊರೆ ಬಂತು

ಬಯಲೂ ಬೆಳುಪೂ ಬೆಳತಿಗೆಯು,
ತಂಪಿನ ಕಂಪಿನ ಹಬ್ಬಿಗೆಯು,
ಹರೆಯಕೆ ಮಬ್ಬಿನ ಪರೆ ತಂತು;
ನನಗೋ—
ನಲ್ಲೆಯ ನೆಳಲಿನ ತೆರೆ ಬಂತು

ಬೆಳುದಿಂಗಳು ಮಲ್ಲಿಗೆಗಂಪ
ಮಲ್ಲಿಗೆ ಬೆಳುದಿಂಗಳ ತಂಪ,
ತಳೆದಿರೆ ಬೆರೆತರೊ ಪೆರೆ-ಕಂತು!
ನನಗೋ—
ನಲ್ಲೆಯ ಲಲ್ಲೆಯ ಕರೆ ಬಂತು.

ಮಲ್ಲಿಗೆ ಬೆಳುದಿಂಗಳದೀ ಕಾಲ
ಪ್ರಿಯಜನ ಸ್ಮೃತಿಗಳು ಮೊಳಗುವ ಕಾಲ
ನಲ್ಲೆಯರಾಸೆಗಳುಕ್ಕುವ ಕಾಲ
ನಲ್ಲರ ಮನ ಝಲ್ಲೆನ್ನುವ ಕಾಲ
ಭಾವೋನ್ಮಾದದ ಭರತಿಯ ಕಾಲ
ಎದೆ ಹೊಯ್ದಾಟದಿ ತುಳುಕುವ ಕಾಲ
ತಾರುಣ್ಯದ ತಾಂಡವಗಳ ತಾಲ
ಚೆಲ್ವಿಕೆಗಳ ಒಳಸಂಚಿನ ಜಾಲ
ಈ ಕಾಲವು ಬರೆ ಹರೆಯಾಂತು
ವಿರಹದ ಸೆರೆಮನೆ ತೆರೆದಂತು
ನನಗೋ—
ನಲ್ಲೆಯ ತೋಳಿನ ಮರೆ ಬಂತು,
ನಲ್ಮೆಯ ಕಡಲಿಗೆ ನೆರೆ ಬಂತು.

**—ಕೃಷ್ಣಕುಮಾರ ಕಾಶ್ಯಪ**

# ಕಾಲವ ಕಳೆಯುವೆನು * * *

ದಾರಿಯ ಕಾಯುತ ಕಾಲವ ಕಳೆಯುವೆನು
ಓಂದಿನ ಸವಿ ಸವಿ ನೆನಸಿನ ಕನಸಿನ
ಜಾಲವ ತಳೆಯುವೆನು.

ಚಂದ್ರನುನಿಲ್ಲದ ಮುಗಿಲಿನ ಜಂಪು
ಮಳೆನೀರಿಲ್ಲದ ಮೋಡದ ಗುಂಪು
ಮೂಡಣ ಗಾಳಿಯ ಗೋಳಿನ ರಂಪು
ಯಾತಕೊ ಏನೋ ಬಂದುದಹೋದುದ-
ನೆಣಿಸಿ ಎಣಿಸಿ ನಾ
ಕಾಲವ ಕಳೆಯುವೆನು.

ಕೋಗಿಲ ಕುಹಿಲಿನ ಕೊರೆತವ ತಾಳಿ
ಜಕ್ಕವಕ್ಕಿಗಳ ಮೊರೆಯನು ಕೇಳಿ
ಅರಿಯದ ಮೌನದ ರುದಿತದಿ ಬಾಳಿ
ವಿರಹದ ಗೀತವ ಎದೆ ಹಾಡುವುದನು
ಅರಿದು ಅರಿದು ನಾ
ಕಾಲವ ಕಳೆಯುವೆನು.

ಎನಿತೊ ವಸಂತದಿ ಎನಿತೋ ಮಲ್ಲಿಕೆ
ಎನಿತೋ ಇರುಳಲಿ ಎನಿತೋ ಚಂದ್ರಿಕೆ
ಎನಿತೋ ಆಸಿಸಿಕೆ ಎನಿತೋ ಬಣ್ಣಿಕೆ
ಮೂಡಿ ಮೂಡಿ ಬರಿ ಬಯಲಾಗುವುದನು
ಬಗೆದು ಬಗೆದು ನಾ
ಕಾಲವ ಕಳೆಯುವೆನು.

ಬಲೆಯನು ಹೆಣೆಯುವ ಬೆಸ್ತರ ಹೆಂಗಳ
ಕಡಲಿನ ಒಡಲನು ಸೀಳುವ ಕಂಗಳ
ನೋಟವು ತೆರೆದಿಹ ಕ್ಷಿತಿಜದ ಅಂಗಳ-
ದಾಚೆಗವರ ನಲ್ಲರ ನೆಳಲಾಟವ-
ನೆನೆದು ನೆನೆದು ನಾ
ಕಾಲವ ಕಳೆಯುವೆನು.

ಹೃದಯದ ರಕ್ತವ ಕಣ್ಣೀರಾಗಿಸಿ
ಪ್ರಾಣದ ಹುಣ್ಣಿಗಳನದರಲಿ ಮಾಗಿಸಿ
ಶ್ವಾಸಶ್ವಾಸದಲಿ ಜನ್ಮವ ಜಾಗಿಸಿ
ನಿನ್ನ ಸಮಾಗಮ ಸನ್ನಿಧಿಯಿಲ್ಲದೆ
ನೊಂದು ನೊಂದು ನಾ
ಕಾಲವ ಕಳೆಯುವೆನು.

ಬೇಸಿಗೆಗಾಲದ ನಡುಹಗಲಿನಲಿ
ಮದವೇರಿಪ ಗಾಳಿಯ ಗಂಧದಲಿ
ಸೃಷ್ಟಿಯ ಒಡಲೇ ಬಿರಿವಂದದಲಿ
ಕರುಳ ಕಡೆವ ಉನ್ಮತ್ತ ಭಾವಗಳ
ಕೊಂದು ಕೊಂದು ನಾ
ಕಾಲವ ಕಳೆಯುವೆನು.

ಯಕ್ಷನ—ಶಾಪಗ್ರಸ್ತನ ಗಾತ್ರವ
ಮಜನೂವಿನ ಮೈಯೆಲುಬಿನ ಚಿತ್ರವ
ಮಿಡಿನಾಗರವನು ಕೊನೆಯನುರಾಗದಿ
ನಿಟ್ಟಿಸಿದಾ ಕ್ಲಿಯೊಪಾತ್ರಳ ನೇತ್ರವ
ಕಂಡು ಕಂಡು ನಾ
ಕಾಲವ ಕಳೆಯುವೆನು.

**—ಕೃಷ್ಣಕುಮಾರ ಕಾಶ್ಯಪ**

## *ಕನ್ನಡ ವನಲಕ್ಷ್ಮಿಗೆ * * *

ಜಗದ ರಕ್ಷಣೆಗಾಗಿ ಉದಯಿಸಿದೆಯೇನು
ಮುದದಿಂದ ಹೃದಯವನು ಅರಳಿಸುವೆ ನೀನು ! || ಪಲ್ಲ ||

೧

ಕನ್ನಡದ ನಾಡಿನಭಿಮಾನ ಬಲು ನಿನಗೆ
ಕನ್ನಡದ ಕಂದ ನಾ ಬಂದೆ ನಿನ್ನೆಡೆಗೆ.

೨

ಕನ್ನಡದ ಘಟ್ಟದಲಿ ಮೃದುಮಂದಹಾಸ
ಕನ್ನಡದ ಕಡಲಿನಲಿ ಏನಟ್ಟಹಾಸ !

೩

ಬಹುದಿನದ ಬಯಕೆಯಿದು ಪೂರೈಸಿತಿಂದು
ಭಕ್ತರಾ ಹೊಣೆಯನ್ನು ಹೊತ್ತಿರುವೆಯೆಂದು.

೪

ರಾಮ ಸೀತೆಯರನ್ನು ಪ್ರೇಮದಲಿ ಪೊರೆದೆ
ದಂಪತಿಗಳೆದೆಯಲ್ಲಿ ದಿವ್ಯತೆಯನೆರೆದೆ !

೫

ಪಾಲಿಸಿದೆ ಪಂಚಪಾಂಡವರ ಆ ಕುಲವ
ತೊಟ್ಟ ಪಂಥಕೆ ನೀಡಿರುವೆ ನೀನೆ ಗೆಲವ.

೬

ಗಾಂಧಿದೇವಗೆ ಶಾಂತಿತುಷ್ಟಿಗಳ ಕೊಟ್ಟೆ
ನಂದಿಬೆಟ್ಟದೊಳಂದು ಪುಷ್ಟಿಯನ್ನಿತ್ತೆ !

೭

ಕನ್ನಡದ ವನಲಕ್ಷ್ಮಿ ನಿನ್ನನೇ ಕಂಡೆ
ಭೂಮಿತಾಯಿಯ ಮೊಲೆಯ ಸವಿಹಾಲನುಂಡೆ !

—ಪ್ರಹ್ಲಾದ ನರೇಗಲ್ಲ

---

* ಉಡುಪಿಯ ಯಾತ್ರೆಯಿಂದ ಮರಳಿ ಬರುವಾಗ ಬಂದ ಅನುಭವ.

# ಕೀರುದನಿ ಬಾರದೊಲು * * *

೧

ಕೀರುದನಿ ಬಾರದೊಲು
ನೀ ಬಾರಿಸು ಕೊಳಲ
ಲಯದ ಜತಿ ಜಾರದೊಲು
ಮೇಳಿಸು ಒಳಹೊಳಲ.

೨

ಹೆಜ್ಜೆಯಲಿ ಗೆಜ್ಜೆಯುಲಿ
ಬೆರೆದಾಗಳೆ ಮೇಳ
ಅಂತರ್ಯದ ಸಂತೃಪ್ತಿಗೆ
ಶ್ರುತಿ ಮೈತ್ರಿಯೆ ಮೂಲ.

೩

ಹಗಲಿನಲಿ ಇರುಳಿನಲಿ
ನಿನದಿಸಲನುರಾಗ
ಉರಿ ಬರಲಿ ಸಿರಿ ಬರಲಿ
ಸಾಗಲಿ ಸಮಯೋಗ.

೪

ರೋಷ ಲಯಿಸಿ ತೋಷವಲಿ
ಸೂಸಲಿ ಸಮನಾದ
ಕರುಳಿನಲಿ ಕೊರಳಿನಲಿ
ಹೊಮ್ಮಲಿ ಸಮ್ಮೋದ.

೫

ಕೊಳಲಿನುಲಿ ವಿರಚಿಸಲಿ
ರಸರಾಗದ ರಂಗ
ಸಮತೆಯಲಿ ಸುಳಿದಾಡಲಿ
ತಿಳಿ ಭಾವ-ತರಂಗ.

—ಡಿ. ಎಸ್. ಕರ್ಕಿ

# ಜೇನು

* * * *

ಎಲ್ಲಿಹುದೆನಲೇಕೆ ಜೇನು ?
ನೀ ಪಾನಗೈಯಲು ಬಲ್ಲೆಯಾದರೆ ಜಾಣ
ಎಲ್ಲೆಲ್ಲು ಇಹುದದು ತಾನು. ||ಪಲ್ಲ||

೧

ಎಲ್ಲಿ ಹೂವಿನ ರಂಗ? ಎಲ್ಲಿಯುದೊ ಭೃಂಗ ?
ಸಂಧಿಸಲವು ಒಂದನೊಂದು
ಯಾವುದೊ ಚದುರಿಂದ ಹೂವಿನ ಮಕರಂದ
ಮಧುವಾಗಿ ಹನಿಯುವುದಂದು.

೨

ಬರಿಯ ಹಂಬಲದಿಂದ ತುಂಬದು ತನಿ ರಸ
ಗುಟ್ಟೇನು ಗುರುತಿಸು ನೀನು;
ಹೊರಗಿನ ಚೆಲುವಿಗೆ ಒಳಗಿನೊಲವು ಕೂಡಿ
ನಲುವಿನ ಜೇಂಗಟ್ಟಿದೇನು?

೩

ಒಲುಮೆಯ ಕಣ್ಣಿಗೆ ಕಂಡೀತು ಹೂ-ನಗೆ
ಅರುಹಿಲ್ಲದೇನಿದ್ದರೇನು ?
ಹೂ-ನಗೆ ಕಂಡಾಗ ನಲಿದೀತು ಬಗೆದುಂಬಿ
ಇಳಿದೀತು ಬಾನಿಂದ ಜೇನು.

—ಡಿ. ಎಸ್. ಕರ್ಕಿ

## ಕೂಡಲ ಸಂಗಮದೆಡೆಯಲ್ಲಿ— * *

ಜೀವನದ ಕಿರಿಯ ಪ್ರವಾಹ
ಹಿರಿಯದರೊಡನಿಲ್ಲಿ ಬೆರೆತಿಹುದು,
ಅದನು ಅರಿತಿಹುದು, ತನ್ನ ತಾ ಮರೆತಿಹುದು.
ಕಿರಿಯಳು ಹಿರಿಯಳ ಅಳವರಿಯಲೆಂದೋ
ಹಿರಿಯಳು ಕಿರಿಯಳಿಗೆ ನೆರವುಗೊಡಲೆಂದೋ
ಹಿರಿಕಿರಿಯರೊಂದಾಗಿ ಹಿರಿಗುರಿಯ ಪಡೆಯಲೆಂದೋ—

ಸಾಗಿಹರಿಲ್ಲಿ ಒಂದಾಗಿ.
ಸುಗ್ಗುವರು, ಧುಮುಕುವರು
ಎಗ್ಗರಿಯರವರು; ಎದುರಿಸಿದ
ಬಂಡೆಗಳನೊಡೆಯುತಿಹರು
ವೃಕ್ಷರಾಜಿಗಳ ಕೀಳುತಿಹರು
—ಸಾಗಿಹರು ಮುಂದೆ ಮುಂದೆ.

ಅಂದು ಕಲ್ಯಾಣದ ಬಸವೇಶ
ಲೋಕಕಲ್ಯಾಣಗೈದ ಧರ್ಮೇಶ
ಬಾಳಿನ ಕಹಿ ಫಲವ ತಾ ಕಂಡು
ವಿಪ್ಲವದ ಕೇಂದ್ರವನು ತಾ ತೊರೆದು
ಪ್ರಶಾಂತ ಸಂಗಮದೇವನಡಿಗೆ ನಡೆತಂದು
ಪುಣ್ಯಕಾಯನಾಗಿ ಪಾರ್ಥಿವಕಾಯವ ತೊರೆದಂದು—

ಕಿರಿಯಳು ಬೆದರಿದಳೆ?
ಹಿರಿಯಳು ನೊಂದಳೆ ?
ಹಿರಿಕಿರಿಯರೊಂದಾಗಿ ಆಕ್ರೋಶಗೈದ
ಸರವೀಯೆಡೆಯಲಿನ್ನೂ ಪಡಿನುಡಿವುದೇ !
ಆರು ಬಲ್ಲರು ? ಅಕ್ಕತಂಗಿಯರು
ಜೀವನದ ಕಹಿಯನಿಲ್ಲಿ ಉಸುರುತಿಹರೇ !

—**ಸ. ಸ. ಮಾ.**

# *ಪುನರ್ಮಿಲನದ ನಂತರ— * * *

(ಏಕೋಕ್ತಿ ಭಾವಗೀತ)

೧

ಮೊದಲ ನೋಟದ ಮೋಹ—
ಓ ಅದೆಂತಹ ದಾಹ!
ಎದೆ ಕೂಡಿದವು ಪ್ರೇಮಭಿಕ್ಷೆಗಾಗಿ;
ಪ್ರಕೃತಿಸನ್ನಿಧಿಯಲ್ಲಿ
ಗಾಂಧರ್ವವಿಧಿಯಲ್ಲಿ
ಮದುವೆನಿಂದೆವು ಹೃದಯಸಾಕ್ಷಿಯಾಗಿ.

೨

ಅಂದು ಸವಿದಾ ಜೇನು-
ಸವಿಯೆಂತು ಮರೆತೇನು!
ಕವಿಜಿಹ್ವೆಗೂ ಸಿಗದ ಸೊಗದ ಸೃಷ್ಟಿ!
ಹಿಗ್ಗಿನುಯ್ಯಾಲೆ ಕಟ್ಟಿ
ಜಗವ ಕೆಳಕೆಳಗಟ್ಟಿ
ಜೀಕು ಹಾಕಿದೆವು ನಾಕವನು ಮುಟ್ಟಿ!

೩

ಮಾತು ಮಿಂಚಾಗಿತ್ತು
ಮೌನ ಮೊಳಗಾಗಿತ್ತು
ಸೂಸುವೊಲುಮೆಯ ಮೇಘವರ್ಷವಾಯ್ತು!
ನಾಲ್ಕು ದಿನದಾ ಬಾಳು
ಸಮರಸದ ಹೊಂಬಾಳು
ಆತ್ಮಗಳ ಬಿತ್ತಿ ಬೆಳೆಕೊಂಡುದಾಯ್ತು!

---

* ಪುನರ್ಮಿಲನದ ನಂತರದಲ್ಲಿ ಶಕುಂತಲೆ ದುಷ್ಯಂತನೆದಿರು ತೋಡಿಕೊಂಡಿರ ಬಹುದಾದ ಭಾವಗಳಿವು.

೪

ಬಳಿಕೊಮ್ಮೆ ನೀ ಹೋದೆ
ನಾ ನಿರಾಶ್ರಿತಳಾದೆ
ಜೀವ ಹೊಯ್ದಾಡೆ ಬಡವಾಯ್ತು ಕಾಯ.
ಅಂಥ ಸುಖಕೂ ಸಾವು
ಬರಬೇಕೆ ?—ಇಮ್ಮಾವು
ಜೀವಾಗಬೇಕೆ ? ಹೇಳಿನ್ನ ರಾಯ.

೫

ನಿನ್ನ ಕರೆ ಬರಲೆಂದು
ಬಂದೆ ತೀರುವುದೆಂದು
ನಾನು ಕಾದರೆ ನಿನ್ನ ಕರೆಯೆ ಇಲ್ಲ !
ಕಾದೆ ಕಾದೇ ಕಾದೆ
ಕಣ್ಣೀರ ಕಡಲಾದೆ
ಆದರೂ ನೀ ಕರೆಯ ಕಳುಹಲಿಲ್ಲ !

೬

ನಿನ್ನನೇ ಧ್ಯಾನಿಸುತ
ನಿನ್ನನೇ ಮಾನಿಸುತ
ನಂಬಿದಳಿಗೀ ಪಾಡೆ ? ಅಯ್ಯೋ—ಎಂದೆ !
ನೀನು ನನ್ನವನೆಂದು
ನಾನು ನಿನ್ನವಳೆಂದು
ನಂಬಿ ಕೆಟ್ಟೆನೆ ! ಆಹ—ಎಂದು ಬೆಂದೆ !

೭

ಮರುಳು ಮೋಹವ ತೊಟ್ಟು
ಕೊರಳ ಕೈಯೊಳಗಿಟ್ಟು
ಕಾಯು ಇಲ್ಲವೆ ಕೊಲ್ಲು ಎಂದೆ ನಾನು !

ನನ್ನ ಮಮತೆಯ ಮರೆತು
ನಿನ್ನೊಳೇ ನೀ ಬೆರೆತು
ಕಡೆಗಣಿಕೆಯಲಿ ನನ್ನ ಕೊಂದೆ ನೀನು!

೮

ನನ್ನ ರೂಪದ ಸೊಕ್ಕು
ತುಂಬು ಜವ್ವನಸುಕ್ಕು
ಝುರ‍್ರನಿಳಿದವು ಗರ್ಭಪೊಳಗೆ ಉರಿಯೆ!
ಓ ಹೊತ್ತ ಹೊನ್ನೆಲವೆ!
ಓ ಹೆತ್ತ ನನ್ನೊಲವೆ!
ಕೊಳ್ಳು ತಾಯೀ—ಎಂದೆ ಬಾನು ಬಿರಿಯೆ!

* * * *

೯

ನಾಥ! ಕೈಕೊಡು ಕೈಗೆ
ಮುಳ್ಳೇಳುತಿವೆ ಮೈಗೆ
ನಿನ್ನ ವಾಗ್ಬಾಣಗಳ ಕುರುಹಿನಂತೆ!
ಸಾಕು, ಹಿಂದಿನ ಗೋಳ
ನೆನಹು ಇಂದಿನ ಬಾಳ
ಹುಣ್ಣಿಮೆಯ ನುಂಗೀತು ಗ್ರಹಣದಂತೆ!

—ಸೇತುರಾಮ

# ಪ್ರಾರ್ಥನೆ * * *

೧

ಬಾಳದಾರಿಯಲಿ ನಡೆವ ನನ್ನ ಗುರಿ
ನಿನ್ನ ಕಡೆಗೆ ಇರಲಿ;
ಏಳು-ಬೀಳುಗಳು ಬಾಳ ವೈಯ ಸಿರಿ
ಎಂಬ ಭಾವ ಬರಲಿ.

೨

ಬಿಸಿಲು ಸುರಿಯೆ ನಡುನೆತ್ತಿಯುರಿಯೆ ಒಳ-
ಜೀವ ಜೀಯದಿರಲಿ;
ಉಸಿರುಗಟ್ಟುವೊಲು ಜಡಿಯು ಸಿಡಿಲು-ಮಳೆ
ಮನವು ತೋಯದಿರಲಿ.

೩

ಕಲ್ಲು ಮುಳ್ಳು ಅಳ್ಳಡಿಯ ಭೇದಿಸಿರೆ
ಆತ್ಮವಳುಕದಿರಲಿ;
ಎಲ್ಲ ನೋವು ನೈಗೂಡಿ ರೂಢಿಸಿರೆ
ಗೆಲುವೆ ಮೂಡಿ ಬರಲಿ.

೪

ನಿನ್ನ ದರುಶನದಿ ನನ್ನ ದುರಿತಗಳ
ನೆನಹೆ ಬಾರದಿರಲಿ;
ನಿನ್ನಪಾರಕರುಣಾಕಟಾಕ್ಷಗಳ
ಬೆಳಕೆ ತೋರುತಿರಲಿ!

—ಸೇತುರಾಮ

# ಮೋಹನೆಯದಾರಿವಳು ? * *

…………ಮೋಹನೆಯದಾರಿವಳು ?

ಮುಗ್ಧ ಭಾವನೆಯು ಮಿಗೆವರಿಯುತಿದೆ ಮೊಗದಲ್ಲಿ;
ಮುಗ್ಧಾಂಗನೆಯೆ, ದಿಟಕೆ ನೀನಾರು ಪೇಳಾ !
ಮಾನವಿಯೆ ? ಅಲ್ತಲ್ತು; ಪುಸಿಮಾತು ಸುರರಮಣಿ !
ಮಾನವರ ಬಸಿರೊಳಿಂತಪ್ಪ ರಸ ಮಾಧುರ್ಯ
ರೂಪುವಡೆವುದೆ ? ಚಿಃ ಇದೆಂತಪ್ಪ ಮರುಳಾಟ !
ಅಪ್ಪೊಡೀ ಸುರಸುರಮ್ಯತೆಯ ತನಿವೆಳಗೇಕೆ ?
ಅಂಗಾಂಗದಿಂ ಸುಸೂಕ್ಷ್ಮ ದಿವ್ಯ ಕಾಂತಿಯದೇಕೆ ?
ಸುರಸರಿದ್ಧಾರೆಯಂದದಿ ಪರಿವ ಸೊಬಗೇಕೆ ?
ಸುಮಮಧುರ ಸೌಂದರ್ಯ ಸ್ವಾರಸ್ಯಮೇಕೆ ?
ಎಲೆ ದಿವ್ಯ ಸೌಂದರ್ಯ, ಎಲೆ ನವ್ಯ ಮಾಧುರ್ಯ,
ದಿವದಾಚೆ ರಾರಾಜಿಸುವ ಮೋಕ್ಷ ಲಕ್ಷ್ಮಿಯಾ
ತೊಳತೊಳಪ ಮೊಗಸಸಿಯನೊಗೆತಂದೆಯಾ ?
ಅಂತಲ್ತೆ ಪರಮ ಶಾಂತಿಯನೆ ಚುಂಬಿಸಿ ಮೆರೆವ
ಸತ್ಯ ಸೌಂದರ್ಯದಾ ನಿಸ್ಸೀಮತೆಯ ಪೆಟ್ಟಿ-
ನಿಂದು ಹೊಳೆಹೊಳೆವ ಮಧುರಾಕಾರಮನ್ಯರ್ಗೆ ?
ಅರಿದರಿದು; ಜಲಧಿಯ ಗಭೀರತೆಯದಕ್ಕಲ್ಲ
ದಸ್ಯಮಾಹಾಶಯಂಗಳ್ಗಂಟೆ? ಚಿಃ ಬಿಡಾ !
ಇಂತಪ್ಪ ಸತ್ಯ ಸೌಂದರ್ಯಾಮೃತದ ಸವಿಯ
ಪೀರ್ವನೇ ? ಸುರಸುಂದರಿಯೆ, ಪೀರ್ದು ತಣಿಯಲೇ ?

—ಭೂಸನೂರಮಠ

# ಹೊಂದೇರು * * * *

೧

ಕನ್ನಡ ನಾಡೊಡಗೂಡುವದು
ಕನ್ನಡ ಗುಡಿ ಹಾರಾಡುವದು;
ಕನ್ನಡ ಕುಲ ಮೇಲೊಂದೇ ಎನ್ನುವ
ದೇವಿಯ ಹೊಂದೇರೆಳೆಯುವದು.

೨

ಪಾಳ್ ಬಿದ್ದಿಹ ಗುಡಿ ಗೋಪುರದೆತ್ತಲು
ಶತದೀಪಾರತಿ ಬೆಳಗುವದು;
ಜಯ ಭುವನೇಶ್ವರಿ ! ಜಯ ಮಾಹೇಶ್ವರಿ !
ಎಂಬಾ ಭೇರಿಯು ಮೊಳಗುವದು.

೩

ಬೀಳ್ ಬಿದ್ದಿಹ ಹಳೆ ಕೋಟೆಯ ಕೊತ್ತಳ-
ದಾಳ್ವೇರಿಯ ಹೊರವಲಯದೊಳು
ನಾಡಿನ ಕೆಚ್ಚೆದೆ ಹರೆಯದ ಕಲಿಗಳ
ಕನ್ನಡ ಪಡೆ ಉಕ್ಕೇರುವದು.

೪

ಬತ್ತಿದ ಹೊಳೆ ಕೆರೆ ಕಾಲುವೆ ಹಳ್ಳವು
ನಾಡಿನ ಹೃದಯದ ನಾಳಗಳು,
ಬಲಗೊಳ್ಳುತಲವು ಹರಿಯುವ ಬಯಲೇ
ಸಿರಿಯಾಳುವ ಹಿರಿ ಕಣಜಗಳು.

೫

ಆಸರೆಗಾಣದ ಕನ್ನಡಿಗನ ಕಲೆ
ನೆಲೆಗೊಳ್ಳುವದು ಹೊಸ ಹುರುಪಿನೊಳು
ಆ ಪುಲಿಕೇಶಿಯು ಮಾಧವ ಪಂಪನು
ಕಲೆಯುವರೊಂದೇ ತಾವಿನೊಳು.

—ಜಿ. ಕೆ. ಹೆಗಡೆ

## ದಿವ್ಯತೆಗೆ ದಿಕ್ಕಾಗಿ— * * *

ಆಗುವೆವು ನಾವು ಮಾನವರು
ಅತಿಮಾನವರು ||ಪಲ್ಲ||
ದೇವ ಮಾನವರಲ್ಲಿ ಸಮತೆಯನು ಬೀರುತ್ತ
ಲೋಕವನೆ ನಾಕಗೆಯ್ಯು— ||ಅ. ಪ.||

೧

ನೆಲಜಲದ ಆಗಸದ
ಅಂತರವ ಗೆದ್ದಿಹೆವು
ಜಾತಿ-ಮತ-ಪಂಥಗಳ
ವಿಷಮತೆಯ ಗೆಲ್ಲುವೆವು.

೨

ದೇಶ ದೇಶದ ಜನರ
ಒಳ ಹೊರಗನರಿಯುವೆವು
ಸೋದರರು ನಾವಾಗಿ
ಆದರದಿ ಬಾಳಿ—

೩

ದ್ವೇಷಮತ್ಸರದಗ್ಧ
ಹತವೀರ ಚೇತನಕೆ
ಶಾಂತ್ಯಹಿಂಸಾಪ್ರೇಮ
ಮಂತ್ರಜಲ ತಳಿದು—

೪

ಪೀಡಿತರ ಹಿಡಿದೆತ್ತಿ
ಗರ್ವಿತರ ಮುರಿಮೊತ್ತಿ
ನವ್ಯತೆಗೆ ಭವ್ಯತೆಗೆ
ದಿವ್ಯತೆಗೆ ದಿಕ್ಕಾಗಿ—

—ಜಿ. ಕೆ. ಹೆಗಡೆ

# ಭಾವಬಂಧ

*　　*　　*　　*

೧

ಚೆಂದಕೆಲ್ಲಿ ಬಂತು ಛಂದ
　　ಭಾವಜೀವಕೆ;
ಹೊಂದಿಕೊಂಡು ಬಂದರಂದ
　　ಛಂದ ಕವಿತೆಗೆ.

೨

ಸಾವು ನೋವಿನಾಟದಲ್ಲಿ
　　ಭಾವ ಬಿಕ್ಕಲು,
ಕಣ್ಣನೀರ ಬುಗ್ಗೆಯಲ್ಲಿ
　　ಭಾವ ಚಿಮ್ಮಲು,—

೩

ಎದೆಯ ತುಂಬ ಸರಸದುಂಬಿ
　　ಪಕ್ಕ ಬಡಿಯಲು,
ರಾಗದುಂಬಿದೆದೆಯು ತುಂಬಿ
　　ಹೊಕ್ಕು ಹರಿಯಲು,—

೪

ನಲ್ಲರೆದೆಯ ಲಲ್ಲೆವಾತು
　　ಮೂಡಿ ಬೆಳಗಲು,
ಪ್ರೀತಿಯಿಂದ ಬಂದ ಮಾತು
　　ಪ್ರೇತವಾಗಲು,—

೫

ಹಸಿರು ಹುಲ್ಲ ಬಸಿರಿನಲ್ಲಿ
　　ಜೀವ ಸೂಸಲು,
ಹಸಿರು ಬಳ್ಳಿ ಹೂವ ಚೆಲ್ಲಿ
　　ನಗೆಯ ಬೀರಲು,—

೬

ನಗೆಯ ನೊರೆಯು ಬಗೆಯ ತುಂಬಿ-
ದಾಗ ತಿಂಗಳು,
ಜಗದ ಜಡತೆ ಜೀವ ತುಂಬಿ
ರಾಗದುಂಬಲು,—

೭

ಗಾನರಾಣಿ ಮಣಿಯುತಿದೆಯ
ವೀಣೆ ಮಿಡಿಯಲು,
ರಾಗವೇಣಿ ಕುಣಿಯುತಿದೆಯ
ಜೇನು ಕಡೆಯಲು,—

೮

ಏನು ಗಾನವೇನು ತಾನ!
ಮೆಯ್ಯ ತುಂಬಲು,
ಸಾನುರಾಗ ರಸದ ಮೌನ
ತುಂಬಿ ಹರಿಯಲು,—

೯

ಯಾವ ಭಾಷೆ ಬರೆವರೇನು?
ಭಾವ ತುಂಬಲು;
ಯಾವ ಛಂದ ಬಂಧವೇನು?
ಭಾವ ಸೂಸಲು.

೧೦

ಭಾವ ಮೆಯ್ಯ ತಾಳಿದಂತೆ
ಭಾಷೆ ಮೂಡಲು;
ಜೀವ ಜನನವಾಗುವಂತೆ
ರೂಪ ತಾಳಲು.

೧೧

ಭಾವಬಂಧವೆನ್ನ ಛಂಧ
ಕಾವ್ಯ ದೇವಿಗೆ
ತೋಳಬಂದಿಯಾಗಲಂದ
ಕಾವ್ಯ ರಾಣಿಗೆ.

—ಕೃಷ್ಣಮೂರ್ತಿ ಪುರಾಣಿಕ

# ಬಲ್ಲವಳು

*　　*　　*　　*

೧

ಉಳ್ಳವರಿಗಿಂತಲೂ ಬಲ್ಲವರು ಮೇಲೆಂದು
ಬಲ್ಲ ಹೆಣ್ಣಿನ ಹಾಂಗ ನುಡಿದು ಬಂದಿ ;
ಮಳ್ಳಮಾತಿನ ಕಲೆಯನೆಲ್ಲಿ ಕಲಿತೆಯೆ ನೀನು
ಇಲ್ಲದವುಗಳ ಸಂತೆ ನೆರಸಿ ನಿಂದಿ.

೨

ಬದುಕು ಬಾಳುವ ಜೀವಿ ಬಯಲ ಮೇಯುವವೇನ ?
ಇರುವ ಹಂಬಲದಲ್ಲಿ ಜೀವ ಸೊಗಸು ;
ಬೆದರಿ ಕಚ್ಚಾಡಿದರೆ ಹುಚ್ಚು ಹರಿಯುವದೇನೆ ?
ಹರಿವ ಜೀವನದಲ್ಲಿ ಭಾವ ಬಿರುಸು.

೩

ಜೀವಿತಕ್ಕಿಂತಲೂ ಜೀವನಕೆ ಬೆಲೆಯೆಂದು
ಮದುವೆ ನಿಲ್ಲುವ ಮೊದಲು ನುಡಿದ ಗರತಿ;
ಭಾವದುಂಬಿದ ಕವನ ಮೈಗೂಡಿದಂತಿರುವ
ಮೊದಲ ಮಾತಿನ ನೆನಹನೆಲ್ಲಿ ಮರೆತಿ ?

೪

ಇರುವ ಜೀವನದಾಗ ಬೆರೆತಷ್ಟು ಬಾಳಿಗಿದೆ
ಇಲ್ಲದವುಗಳ ಹಗ್ಗ ಕೊರಳಸುತ್ತ
ಹರವಿಕೊಳ್ಳುವ ಭರದಿ ಬಾಳುಸಿರು ಬತ್ತಿದರ
ಎಲ್ಲ ಪಾಪದ ಲೆಕ್ಕ ನಿನ್ನ ಸುತ್ತ.

೫

ಉಳ್ಳವರಿಗಿಂತಲೂ ಬಲ್ಲವರು ಮೇಲೆಂದು
ಬಲ್ಲ ಹೆಣ್ಣಿನ ಹಾಂಗ ನುಡಿದು ಬಂದಿ;
ಮಳ್ಳ ಮಾತಿನ ಕಲೆಯನೆಲ್ಲಿ ಕಲಿತೆಯೆ ನೀನು
ಇಲ್ಲದವುಗಳ ಸಂತೆ ನೆರಸಿ ನಿಂದಿ.

—ಕೃಷ್ಣಮೂರ್ತಿ ಪುರಾಣಿಕ

# ಯಕ್ಷಿಣೀ ಸಂದೇಶ * * *

**ತವರುಮನೆಗೆ ಹೋಗಿರುವ ಮಡದಿ ತನ್ನ ಪ್ರಿಯನನ್ನು ಕುರಿತು—**

ನಿಮ್ಮನು ಕರೆಯುತಿದೆ
ಹೃದಯವು ನನ್ನನು ಕೊರೆಯುತಿದೆ ||ಪಲ್ಲ||

೧

ಬೆಳಗು ಬೈಗಿನಂಚೆಗಳನು ನೋಡಿದೆ
ಬರವಿನ ಒಸಗೆಯ ತರಲಿಲ್ಲ
ಇಂದೇ ಕರೆ ಬಹುದೆಂದೇ ಹಾಡಿದೆ
ನಿಮ್ಮಯ ಓಲೆಯು ಬರಲಿಲ್ಲ.

೨

ಮಗಳಿಗೆ ತವರೇ ಸಗ್ಗವು ಎಂಬರು
ತಿಳಿಯದ ಹುಂಬರು ಎಲ್ಲೆಲ್ಲ
ನಿಮ್ಮನಿಸೋಂಕೇ ಹಿಗ್ಗಿನ ತವರೆನ-
ಗೆಂದುಸುರಿದೆ, ನಿಮಗರಿದಲ್ಲ.

೩

ಪಂಚಮಿ ಬಂದಿತು ಅಣ್ಣನ ತಂದಿತು
ತವರಿಗೆ ಹೋದೆನು—ಏನರ್ತಿ !
ಸಾವಿರ ತರಹದ ಗೌರಿ-ಗಂಗೆಯರು
ಸೆರೆ ಹಿಡಿದವು—ಇಳಿಯಿತು ಸ್ಫೂರ್ತಿ.

೪

ತವರಿಗೆ ಬಂದರು 'ತಕ್ಷಣ' ಮರಳುವು
ದುಚಿತವು ಲೋಕದ ಬಗೆಯಲ್ಲಿ
ತವರು ತವರು ಎಂದಿಲ್ಲಿಯೆ ತಳವೂ-
ರಿದರೆ ಏನು ಗತಿ ಜನರಲ್ಲಿ !

೫

‘ ಇಂದೇ ಬಂದೆನ್ನನು ಕರೆದೊಯ್ಯಿರಿ
ತವರಿನ ಮೋಹವು ನನಗಿಲ್ಲ’
—ಎಂಬೀ ಮಾತನು ಅಪ್ಪನಿಗೊಡೆದರೆ
ನನ್ನ ಪಾಡ ದೇವರೆ ಬಲ್ಲ.

೬

ಅಪ್ಪನೆದುರಿಗೇ ಹೇಗೆ ಕಳಿಸಲೀ
ಅಂತರ್ವಾಣಿಯ ತಂತಿಯನು
ಯಕ್ಷಿಣಿಯಳ ಈ ಮೇಘದೊಸಗೆಯನು
ತಿಳಿದು ಮನ್ನಿಸಿ ವಿನಂತಿಯನು.

—ಎನ್ಕೆ

## ದೀಪಾವಳಿ * * *

ನನ್ನ ದೀಪಾವಳಿ
ರನ್ನ ದೀಪದಾವಳಿ

೧

ಅಕ್ಕ ತಂಗಿ ಅಣ್ಣ ತಮ್ಮ
ಬಂಧು ಬಳಗದೊಂದಿಗೆ
ನಕ್ಕು ನಲಿವ ಹಿರಿಯ ಹಬ್ಬ
ಸುಗ್ಗಿ ಕಾಲ ಸಂಧಿಗೆ.

೨

ಹೊಸಬ ಮಾವ ಹೊಸಬ ಭಾವ
ನಸು ನಗೆಯಲಿ ಮಿನುಗುವ
ಮೋಹನಾಂಗಿಗಾಗಿ ಅಳಿಯ
ಮಾವನ ಸೆರೆಯಾಗಿಹ.

೩

ಸೊಡರ ಸಾಲು ಅಡರಿ ಮೇಲು
ತಮವ ಕಳೆದು ತೊಳಗಿವೆ.
ಸಗ್ಗ ಸೊಡರ ಭೂಮಿಗಿಳಿಸಿ
ದಿಗ್ದಿಗಂತ ಬೆಳಗಿವೆ.

೪

ವರುಷ ವರುಷ ಬರಲಿ ತರಲಿ
ಹೊಸ ಆಶೆಯ ನಮ್ಮಲಿ.
ನಮ್ಮ ಮನದ ತಮವ ಕಳೆದು
ಬೆಳಕ ನೀಡಿ ಗೆಲ್ಲಲಿ.

—ಕುಲಕರ್ಣಿ ಸ್ವಾಮಿರಾಯ

## ಕಾಲು ಜಾರಿತು * * *

ಬೆಳಕು ಕಂಡಿತು
ಥಳಕುಗೊಂಡಿತು
ಜುಳು ಜುಳು ಹರಿಯುವ ಸರಿಯಲಿ
ಪಳಿಕು ಬೆಳಗಿತು !

——ಬಳಿಯ ಕೊಳದಲಿ
ತಿಳಿಯ ಜಳವಲಿ
ಸಾವಿರಾರು ತಾರೆಯ ಸಡು
ತೋರಿಕೊಂಡಿತು.

—ಸಗ್ಗದಾ ಸೊನೆ
ಹನಿಯಿತೊ ಎನೆ
ಕಣ್‌ಮನಗಳ ತಣಿಸುತೊಂದು-
ಬಿಂಬ ಬೆಳಗಿತು.

—ಇವನೆ ಚಂದ್ರನೆ ?
ಸುಕರಸಾಂಪ್ರನೆ ?
ಭೂಮಿಗಿಳಿದನೇಕೆ ? ಜಲವ
ಆಳಿಯಲಿರುವನೆ ?

—ಓಹೊ ! ತಿಳಿಯಿತು
ಒಡಪು ಹೊಳೆಯಿತು !
ಮೋಡ ಮೇಲೆ ಓಡುವಾಗ
ಕಾಲು ಜಾರಿತು.

—ಕುಲಕರ್ಣಿ ಸ್ವಾಮಿರಾಯ

## ಬೇಸರು * * * *

೧

ನೀ ವಿಶ್ವದಂಚಿನಲಿ ಮೈದೋರಿದೊಡನೆ
ಸೂರ್ಯನನು ಚಂದ್ರನನು ಮೋಡ ಮುತ್ತುವುದು.
ನಿನ್ನೊಂದೆ ನೋಟದಿಂ ವಿಷಮುಯುಕಟಾಕ್ಷದಿಂ
ಪ್ರಾಣವಾಯುವಿನಸುವ ಹೀರುತಿಹೆ ನಿರ್ದಯದಿ ನಿಶ್ಶೇಷವಾಗಿ.

೨

ತೊಂಗಲೊಳ್ವುದುಗಿ ಸ್ಪನಸುಧೆಯ ಜೀವಿಗಳುರದಿ
ಹರಿಸುತಿಹ ಹಕ್ಕಿಗಳಿಗಲ್ತೆ ಕೊರಲುರುಲು
ಹೆಜ್ಜೆದುಳಿತಕೆ ಅರಳ ನಗೆಮೊಗವ ಹೊಸಗಿಕ್ಕಿ
ಆನಂದ ಉಲ್ಲಾಸಗಳ ಕೊರಳ ಮುರಿದೆಸೆವ ಭೈರವಿಯು ನೀನು.

೩

ಉಂಡರೂ ಉಣಿಸಲ್ಲ ನೋಡಿದರು ಕಣ್ಕುರುಡು
ಮಾತಿನಲಿ ಮೊಳಗುವುದು ಮೌನದ ಮೃದಂಗ;
ಸ್ವಚ್ಛಂಧ ಬಂಧನವು ಸಂಗದಲಿ ನಿಸ್ಸಂಗ
ಶಾಂತಿಸವತಿಯು ನೀನು ಶೀತೋಷ್ಣಸುಖದುಃಖದ್ವಂದ್ವಹೀನೆ.

೪

ಮೃತ್ಯುಭಗಿನಿಯೆ! ನೀನು ಕೊಲ್ಲಬಯಸುವಳಲ್ಲ
ಕೊಲ್ಲದೆಯು ಬಿಡೆ ನೀನು ಯಮುನ ನವಸೀರೆ!
ಮುಳ್ಳುಮೈಯೊಡ್ಡಿ ನೀನಪ್ಪಿ ನೆತ್ತರ ಹೀರ್ವೆ;
ಆತ್ಮಗಳ ಮಿಡುಕಾಟ ನಿನ್ನ ಕುಣಿತಕೆ ತಾಳ,—ನಿನಗಲ್ತೆ ಆಟ!

—ನಾ. ಗೋ. ದೇವ

## ಬಯಕೆ

* * * *

ಇಂದಿಲ್ಲವೆಂದಾನು ಹಳಿಯುವದು ಸಾಕು
ಮುಂದೆ ಬರುವದು ಎಂಬ ಹಂಬಲವು ಬೇಕು.
ಮುಂದಿನದ ಮುಚ್ಚಿಹಳು ಮೂಜಗದಮಾತೆ
ಮುಂದು ಬರುವದು ಒಡನೆ ಮಂಜು ಬಯಲಾಗೆ.
ಹಿಂದು ಇಂದುಗಳನ್ನು ನೆನೆನೆನೆದು ಮನದೊಳಗೆ
ಬೆಂದು ಬೆಂಡಾಗುವದು ಸಾಕುಸಾಕಿನ್ನು.
ಕತ್ತಲೆಯು ಬಂದೊಡನೆ ಬೆಳಕು ದೂರಿಲ್ಲ
ಬತ್ತಿರುವ ಝರಿ ನಿತ್ಯ ಬತ್ತಿಹೋಹುದೆ ಇಲ್ಲ.
ನಿಶೆಯ ಅರ್ಚಿಸು, ನೋಡು ನೋಡಲ್ಲಿ ಭಾಗ್ಯದಾ
ಉಷೆ ಬಹಳು! ಹಿಡಿ ಬಯಕೆ! ಬಿಡು ದುಗುಡ ಮನವೇ.

—ಆರ್. ಸಿ. ಹಿರೇಮಠ

# ನಲ್ವಾಡು * * * *

ಅಳಕಾವಳಿಗಳ ಅಳಿಗಳ ಬಳಗವು
ಮೊಗದಾವರೆಯನು ಮುತ್ತುತಿರೆ,
ಮೀಂಗಳ ಹೋಲುವ ಕಂಗಳ ಕಾಂತಿಯು
ಮೇರೆ ಮೀರಿ ಮಿಗೆವರಿಯುತಿರೆ,
ನಾಸಾಮುಕುಳಂ ಮೆಲ್ಲುಸಿರೆಲರಿಂ
ಬಗೆಬಗೆಯಂದದಿ ಅರಳುತಿರೆ,
ನಿನ್ನಯ ಕನ್ನಡಿಗದಪಿನ ಆಳದಿ
ನನ್ನಯ ಮೊಗ ಪಡಿಮೂಡುತಿರೆ,
ಬಿಂಬದ ಫಲವಂ ಜರಿಯುವ ಛಲದಿಂ
ಬಾಯ್ದೆರೆಗಳು ಮೆರೆಮೆರೆಯುತಿರೆ,
ನಿನ್ನಿನಿಪಾತಿನ ಇಂಚರದಿಂಪನು
ಕೇಳುತ ಮನ ನಲಿನಲಿಯುತಿರೆ,
ಕೋರೈಸುತ ಎನ್ನಯ ನಯನಂಗಳ
ಕನ್ನವುರಂಗಳು ಕುಣಿಯುತಿರೆ,
ನಾಗವೇಣಿಯದು ಕೊರಳನು ಬಳಸುತೆ
ಏಕಾವಳಿಯೊಡನೆಸೆಯುತಿರೆ,
ಕೊಂಕಿಸಿ ಕೊರಳನು ಬಿಂಕವ ಬೀರುತ
ನವಿಲಿನಂತೆ ನೀ ನಡೆಯುತಿರೆ,
ಹೊಂಬಸಿರನ ಹಿರಿಯೊರಕದ ಬೊಂಬೆ
ನಿನ್ನಯ ರೂಪನು ಏನೆಂಬೆ !
ಸುಂದರ ಸುಮನಸ ಸತಿಯರ ರೂಪಿಗೆ
ಹೋಲಿಕೆ-ಗೀಲಿಕೆ ಬೇಡೆಂಬೆ !
ಪ್ರೇಮಾಮೃತವಂ ನೀಡೆನಗೆ
ಕಾವ್ಯದ ತನಿರಸವೊಡೆನೆಗೆ !

ಸಾಸದನಾಗಲಿ ನಿನ್ನಯ ರೂಪ
ಕವಿಗಿದು ಸ್ಫೂರ್ತಿವಿಶೇಷಾಟೋಪ !
ನಾಕದ ಚಿರಸುಖವೆನಗದು ಬೇಡ
ಮುಕುತಿಯನೊಂದುವ ಯುಕುತಿಯು ಬೇಡ,
ಈ ತನಿನೋಟವು ಚಿರವಾಗಿರಲಿ,
ಬಗೆಯಲಿ ಭಾವಗಳುಕ್ಕುತಲಿರಲಿ
ನಿನ್ನನು ಬಣ್ಣಿಪ ಜಾಣ್ನುಡಿ ಬರಲಿ
ನನ್ನಿನಿಗಬ್ಬವ ಕೇಳುತ ನೀ ನಲಿ !

—ಬಿ. ಟಿ. ಸಾಸನೂರ

# ಚಂದಿರನ ತನಿಬೆಳಕು! * ⁘ *

೧

ಚಂದಿರನ ತನಿಬೆಳಕು ಸೂಸುತಿರಲು
ತಾರೆಗಳ ಚೆಲುವು ಬಾನ್ಬೆಳಗುತಿರಲು
ಮಂದಮಾರುತ ಸುಳಿದು ಸುತ್ತುತಿರಲು
ನೊರೆಸೋಡ ಪಥಿಕರೊಲು ಸಾಗುತಿವೆ ಕೋ !

೨

ಆಹಹ ಏನಿದು ರಮ್ಯ! ಏನು ಸೌಮ್ಯ!
ಮನದಿ ಮೋಹತರಂಗ ಚಿಮ್ಮುತಿರೆ ಹಾ!
ಬಗೆವಕ್ಕಿ ಗರಿಗೆದರಿ ನಭಕಡರಲೆಂದೋ
ಏರುತಿದೆ ಹಾರುತಿದೆ ನೋಡುತಿದೆ ಕೋ !

—ಬಿ. ಆರ್. ವಾಡಪ್ಪಿ

## ಸಮಾಗಮ * * * *

೧

ನಿನ ಮಾರಿವ್ಯಾಗಿನs ನಗೀ
ಕಂಡು ನನ ಬಗೀ
ಆಯಿತs ಅರಳಿಧಾಂಗ ಮಲ್ಲಿಗೀ.

೨

ನಿನ ಕಣ್ಣಿನ್ಯಾಗಿನs ಪ್ರೀತಿ
ಓತು ಕಂಡ ರೀತಿ
ನೋಡಿ ಇರಲಿಲ್ಲ ಹಿಗ್ಗಿಗಿತಿಮಿತೀ.

೩

ನೀನೊಲಿದು ಉಲಿದ ಆ ಮಾತು
ಸವಿದು ಮನ ಹೂತು
ಹಿಗ್ಗಿದೆದಿ ಆಹಾ ಎಂದಿತs ಸೋತು.

೪

ಒಮ್ಮಿಗಿಲೆ ಬಳಿಗೆ ನೀ ಬಂದಿ
ಮೈಗೆ ಮೈ ಹೊಂದಿ
ಬೊಗಸೆಗಣ್ಣೀಲೆ ಏನೇನೋ ಅಂದಿ.

೫

ತೋಳ್ತೆರೆದು ಎಂಥ ನಗಿ ನಕ್ಕಿ
ತುಟಿಗೆ ತುಟಿ ಇಕ್ಕಿ
ಬಿದ್ದಿತs ಜೀವ ಜೀವಕs ತೆಕ್ಕಿ.

—ಗಂಗಾಧರ ಚಿತ್ತಾಲ

## ಪುನರಾಗಮ * * * *

೧

ನೆನಹು ನಾಡಿನ ತೂಗುರೆಂಬೆಗಳೊಳಿಂದ ಹಾಯ್ದು
ಇಂತಚಾನಕವಾಗಿ ಏಕೆ ಬಂದೆ?
ಎಲ್ಲೊ ಕಣ್ಮರೆಯಾದ ಲೋಕದುಸಿರಂತೆ ಬೀಸಿ
ಇಂಥ ಬೆಳಕಿನ ಕ್ಷಣವನೇಕೆ ತಂದೆ?

೨

ನಿನ್ನೊಡನೆ ಮರಳಿ ಬಂತು ಮುನ್ನೀರು ತುಂಬಿದಂತೆ
ಬಾಳಸೆಳವಿನಲೆಲ್ಲೊ ಮರೆತ ಈ ಎದೆಯ ಬಯಕೆ.
ಜೀವ ಜೀವಾಳದಲ್ಲೆಲ್ಲೊ ಇಳಿದು
ಗುಪ್ತಗಾಮಿನಿಯಾದ ವಿರಹ ವ್ಯಥೆ.

೩

ವಿಧಿ ತೆರೆದ ಪಥದಲ್ಲಿ ಅಂದು ಮುಂಜಾವಿನಲ್ಲಿ
ಬೇರೊಬ್ಬ ಭಾಗ್ಯವಂತನ ಸುಖಿಸಲು
ನನ್ನ ಜೀವನದಳವಿನಾಚೆಗೂ ನಡೆದೆ ನೀನು
ದಾಟಿ ಈ ಜಗದ ಹೊಸಲು.

೪

ಬಂದಿರುವಿ ಮತ್ತೆ ಅಹ! ಸಹಜ ಸೌಹಾರ್ದದಲ್ಲಿ
ನಗುತಿರುವಿ ಮಾರಳತೆಯಲ್ಲಿ ನಿಂತು.
ಸಖಿ ನೀನು, ಪ್ರಾಣಸಖಿಯಲ್ಲ! ನಾವಿರ್ವರೂ
ನೂರು ಯೋಜನ ದೂರ, ಮರೆಯಲೆಂತು?

೫

ನಿನ್ನ ಈ ಹೂಬಿಸಿಲಿನಂಥ ನಗೆಯು
ಎದೆಯ ಸಿಹಿಕಣ್ಣುಗಳಲಿಳಿದ ಬಗೆಯು
ಬಗೆಯು ಕದಡಿವೆ ಅಂದಿನಂತೆ ಇಂದೂ.
ನೀನೊಂದನೂ ಅರಿಯೆ; ಆಹಾ ನಮ್ಮಯ ನಡುವೆ
ಮೊರೆವುದು ಅನುಲ್ಲಂಘ್ಯ ಲವಣಸಿಂಧು!

—ಗಂಗಾಧರ ಚಿತ್ತಾಲ

# ಸೊಬಗಿನ ರಹಸ್ಯ * * *

೧

ಭೂಮಿವ್ಯೋಮಗಳೊಂದನೊಂದು ಚುಂಬಿಸುವೆಡೆಗೆ
ಸೊಬಗು ಮರೆಯಾಗಿ ಮೈಮರೆತು ನಗುತಿಹುದು;
ರವಿ ಮೂಡಿ ಚೆಲುವ ಹೊಂಬೆಳಕ ಹರಹರಡುತಿರೆ
ಚೆಲುವು ಕುಣಿಕುಣಿದು ತಣಿತಣಿಯುತ್ತಲಿಹುದು.

೨

ಪಕ್ಷಿಗಳ ಕಿಲಕಿಲದಿ ತರುಲತೆಯ ಮಿಲನದಲಿ,
ಚೆಲುವು ತಾ ಸುಖಿಯಾಗಿ ಬೀಡು ಬಿಟ್ಟಿಹುದು;
ತಿಳಿಯ ಹಸುರಿನ ಮೇಲೆ ಮಿನುಗುತಿಹ ಮಣಿಗಳಲಿ
ಚೆಲುವು ಹಸುಗೂಸಿನಂದದಲಿ ಒರಗಿಹುದು.

೩

ಏನೊಂದು ಸೌಂದರ್ಯ ಎಷ್ಟೊಂದು ಸೌಂದರ್ಯ
ಅಡಕವಾಗಿಹುದು ವಿಸ್ತರಿತ ಜಗದೊಳಗೆ!
ನೋಡಿದೆಡೆಯೊಳು ಸರಸಸೌಂದರ್ಯಕಲೆಯದುವೆ
ಇಣಿಕಿ ನೋಡುವುದು ಗಡ ಮಿಂಚಿ ಪೋಗುವುದು.

೪

ಚೆಲುವನರಿತವರಾರು? ಅರಿತು ತಿಳಿಸುವರಾರು?
ಸೃಷ್ಟಿಯೇ ಸಗ್ಗವೆಂದೊಲಿದುಲಿವರಾರು?
ಚಿತ್ರಕನು ಸೊಬಗು ಚಿತ್ರಿಸಿ ತಾನೆ ಕುಣಿದಾಡನೆ
ಚಿತ್ರವದು ತಾ ಮೂಕ ಚೆಲುವೆಯಂತಹುದು.

೫

ಚೆಲುವನುಂಡುಂಡು ಮೈಮರೆಯುತಿಹ ಕವಿವರನ
ಹೃದಯದಲಿ ಹೊರಟ ಸವಿನುಡಿಯ ಹೆಣಿಕೆಯಲಿ
ಚೆಲುವು ಚೆಲುವೆಯ ತೆರದಿ ಮೃದುಹಸಿತ ವದನದಲಿ
ನುಡಿಸಿ ರಸಿಕರಿಗೆ ಸುಖವುಣಿಸಿ ತಣಿಸುವುದು.

—ಅಂಬಕ್ಕ ಸೋನಾರ

# ಕನಸಿನ ಚಿತ್ರ * * *

೧

ಕನಸಿನಲ್ಲಿ ಕಂಡ ರೂಪ
ಮನಸಿನಲ್ಲಿ ಮೊಳೆತು ಚಿಗಿತು
ನೆನಹವನೆಯ ಬಾಗಿಲೆಡೆಗೆ ಸಾಗಿ ಕುಡಿಯ ಚಾಚಿತೇ !

೨

ಶರದ ಜೊನ್ನ ಬಾನಿನಿಂದ ,
ಧಾರೆ ಧಾರೆಯಾಗಿ ಹರಿದು
ಇಳೆಯನೆಲ್ಲ ತಬ್ಬಿಕೊಂಡು ಮಾಯೆ ಕವಿದು ಮುಸುಕಿರೆ
ತುಂಡು ಬೆಳ್ಳಿಮುಗಿಲು ಮೌನ ಧಾರಿಯಾಗಿ ಮರೆದಿರೆ,—

೩

ಅಲ್ಲಿ ಒಂದು ಮಲ್ಲಿಗೇಲಿ
ರೂಪು ಅರಳಿ ಹೂವ ಬೇಲಿ
ಬಿಟ್ಟು ವಿಶ್ವರಂಗದೆಡೆಗೆ ರಾಗ ಕೊನರಿ ಮೂಡಿತೇ !
ಎಲ್ಲ ಚೆಲುವು ಒಂದುಗೂಡಿ ಚಂದ ದೇಹ ತಳೆದಿತೇ !

೪

ತುಂಬಿಗೊರಲಿನಿಂದ ದನಿಯು
ತಾನ ತಾನವಾಗಿ ತೇಲಿ
ಜಗದ ಜೀವ ಚೇತನೆದೆಯ ರಾಗ ಹೊಮ್ಮಿ ಹೊರಟಿತೇ !
ತಾನು ತನ್ನದೇನು ?— ಎಂದು ದಿವ್ಯವಾಗಿ ಮಿಡಿದಿತೇ ?

೫

ಬೆಳಕು ಅರಳಿ ಬೆಳ್ಳಿಯಾಗಿ
ಹೂವು ಹಿಗ್ಗಿ ದೇಹವಾಗಿ
ದೇವಲೀಲೆ ಚಿತ್ರವೆಲ್ಲ ಮೆಲ್ಲ ಹುಡಿಯಲಡಗಿತೇ !
ದೇಹವೆತ್ತ ಜೀವಮಾಲೆ ಮಣ್ಣಿಗಾಗಿ ಎಂದಿತೇ !

—ಫ. ಬ. ದೇಸಾಯಿ

# ಮೌನ-ಗಾನ

*　　*　　*

೧

ದಣಿದ ಹಾದಿಪಯಣಕಾರ,
ಬಿಸಿಸುಯಿಲಿನ ಎಲೆ ಸಮೀರ,
ಬಾ ಈ ಕೆಲದೊತ್ತಿಗೆ
ಬಂದೆ ಒಳ್ಳೆ ಹೊತ್ತಿಗೆ.
ತುಸು ವಿರಮಿಸು ಬಳಿ ಕೆಲದೊಳು—
ನೆಳಲು ಮಳಲು ಪ್ರಣಯವಾಡು
ವಂಥ ನೆಲದ ತೊಡೆಯಲಿ;
ಇದೊ ನುಡಿಸುವೆನೊಂದು ಹಾಡು—
ಮೌನ ಗಾನ ಇದರ ಪ್ರಾಣ—
ಈ ವಿಶಾಲ ಗುಡಿಯಲಿ !

೨

ಬಿಮ್ಮನೆಂದು ಕೂಡಬೇಡ
ಕಿವಿಯನಿಡಾ ನೆಲಕೆ ನೋಡ;
ಬೇಸರದಲಿ ಆಸರ
ಆಗುವಂಥ ಸವಿಸರ
ಉಲಿಯುಲುಂಟು, ಒಲವ ನಂಟು;
ಬೇರೆ ಗೀತವೆಲ್ಲ ಕುಂಟು !
ಹೇಳಲೇನು ಕಾರಣ ?
ಪ್ರಣಯ ಸೊಲ್ಲು ಪ್ರಣವದಲ್ಲಿ
ಮಿಳಿತವಾಗಿ ತಾನೆ ಬಹುದು
ತಳೆದು ಗಾನ ಧಾರಣ !

೩

ಬೆಳಸಲೇಕೆ ಬಹಳ ಮಾತು
ಗೆಳೆಯ ಬರಲು ದಯವೆ ಕಾತು?
ಸಾಕೀ ಪ್ರಸ್ತಾವನೆ
ಬಿಡಿಸುವೆ ನಿಜ ಭಾವನೆ.—
ಇಲ್ಲಿ ಇದುವೆ ಕ್ಷೇತ್ರದಲ್ಲಿ
ಒಲವಿನವಳ ಉಸಿರು ಕರಗಿ
ಇಳಿದಿತು ಇಳೆಯೊಡಲಲಿ ;
ಬಯಕೆ ಮಾತ್ರ ಇಳಿಹಗಲಿನ
ಛಾಯೆಯೊಲೇ ಉಳಿದೆ ಇರಲು
ಮರೆದಿತು ಮೆಯ್ ಹುಡಿಯಲಿ !

೪

ಆಡಲಾರೆ ಹಾಡಲಾರೆ,
ಕಣ್ಣ ನೀರ ಕಡೆಯಲಾರೆ ;
ಇಲ್ಲ, ಬಲ್ಲೆ, ಹರುಷವು ;
ಕಳೆದುವೇಸೊ ವರುಷವು.
ನೆನೆವನಲಾ ಪೃಥಿವಿ ಪ್ರೇಮ—
ಇರಲು ಸಲ್ಲ ದೂರ ವ್ಯೋಮ
ತಳಮಳವೇ ಒಳಬಗೆ;
ಇಂಥನಂತ ಹೃದಯ ಸುಯಿಲು
ಬದುಕಿಸಿತಲ ಜಗದ ಬಾಳ ;
ಇಲ್ಲದಲ್ಲಿ ಧಗೆ-ಹೊಗೆ !

೫

ಇರಲಿರೆ ಇದೆ ದಿಟದ ಪ್ರೀತಿ
ಇದರುಸಿರೇ ಶಿವದ ಗೀತಿ !
ಇವಳಿದೆ ನೆಯ್ ಅವಳಲಿ,
ಜ್ವಾಲಾರಸ ಕೊಡದಲಿ,
ಇಳಿದು ಸೇರಿತಣ್ಣಾ ತನ್ನ
ಹವಣು ತಾಣ ಕಂಡೆ ಮುನ್ನ
—ಎಂಬೆನಲಾ ಎಂಬೆನು !
ಸೃಷ್ಟಿ ಮಿಡಿವ ಓಂಕಾರಕೆ
ಒಲವ ಸುಯಿಲು ಮೇಳಗೊರಲು ;
—ಬೇರೆ ಮಾತ ನಂಬೆನು !

೬

ಹೊರಟಿಯೇನು ಗಾಳಿದೇವ,
ತಳೆದು ಎನ್ನ ಹೃದಯ-ಭಾವ
ಸಲಿಸೆ ಜೀವ ಲೋಕಕೆ,
ತಣಿವಿನ ದನಿ ಶೋಕಕೆ ?
ಯಾರದೇನು ಎದೆಯ ಸಹಿತ,
ಮಾಗಿ ಬರಲು ಚಿರದ ಚರಿತ,
ತೊಳೆಯೆ ಮನದ ಮ್ಲಾನವ.
ನಮಸ್ಕಾರ ! ಸಖ ಸಮೀರ,
ಹಾದಿಯೊಳಗೆ ಹಾಡು ನೇಹ,
—ಇದೇ ಮೌನ ಗಾನವ !

—**ಚಿದಂಬರ ದೀಕ್ಷಿತ**

# ಬ್ರಹ್ಮಚಾರಿ * * *

೧

ಕಲುಷಿತ ಹೃದಯದ ಕೆಂಗನಸಿನ ಆ
ಮಾಯಾನಗರವ ಹೊಕ್ಕಿದ್ದೆ,
ಅಮೃತ ಶಿಲೆಯ ಚೆಲು ಬೀದಿ ನಡುವೆ ನಾ
ನಡೆಯೆ ರಾಜನೊಲು ಸೊಕ್ಕಿದ್ದೆ,
ಬಳಿಗೆ ಸುಳಿದ ಅದೆ ಆಪ್ತ ಅರಮನೆಯ
ಒಳಗೆ ನುಸುಳಿ ಕದವಿಕ್ಕಿದ್ದೆ.

೨

ಎಂಥ ಮಹಲು ಅಹ! ದಂತ ಮಲರಿದೊಲು
ಇದಕು ಉಂಟು ಸವಿ ಮಗಮಗಿಸೆ;
ಕಂಪು ಗಾಳಿ ಕೈಕರೆದು ತೋರುತಿದೆ
ಹೂವು ಮಂಚ ತಡಿ ನಳನಳಿಸೆ;
ಏನೊ ರಸವು ಹೊಸ ಗಾನ ಬೆರೆಯುತಿದೆ
ಯಾವ ಬೇಟವನೊ ಮನ ನೆನಸೆ.

೩

ಅರರೆ! ದೇಹ ಮನ ಪಕ್ಕ ಹಿಡಿದುವೆನೆ
ಹಾರತೊಡಗಿದುವು ಗರಿಗೆದರಿ;
ಅಲ್ಲಿ ಬಂತು ಸಖಿ ಮೇಳ ಸುರಗುವುರಿ-
ಗುಂಪು ಕರೆಯೆ ಒಲು ಪುಷ್ಪ-ಸರಿ;
ಹಾರೆ ಸೋತೆ ಮರುಚಣದಿ ಅವರ ಎದೆ-
ಬಿಸಿಯ ಗಾದೆಯೊಳು ಮೈ ಮುದುರಿ.

೪

ಅಮರ ಕನ್ನೆಯರ ನುಣ್ಣ ಬಣ್ಣ ರಸ
ಕಣ್ಣ ವರ್ಣಿಸುವನಾವ ಕವಿ ?
—ಹರಕು ನೆನಪು ಇದೆ, ಮರುಕಪೆರೆದ ರತಿ
ಗೆಳತಿ ಕಮಲೆಯುಡೆ ರೂಪು-ಛವಿ.—
ದೊರೆತ ಸವಿ ಸಮಯ ಬರಿದೆ ಹೊಗಳುವುದು
ಕುರುಡ ಬರೆದ ತೆರ ಹಗಲ ರವಿ.

೫

ನಿದ್ದೆ ಅಲ್ಲಿಯೇ ಮುದ್ದ ಕೊಡಲು ಅದ
ಸುದ್ದಿ ಹೇಳುವುದು ತರವೇನು ?
ಬೆಳಗಿನುದಯಕಾ ಚೆಲುವೆ ಅಮೃತವನೆ
ಸಿಂಚಿಸೆಚ್ಚರವ ತರಲಾನು,
ತೆರೆದು ಎವೆಯ, ಬಳಿ ಕಂಡೆ—ಎನ್ನದೆಯ
ಗುಡಿಲು, ಸುರಿವ ಇಬ್ಬನಿ ಜೇನು !

೬

ಏನು ಏನು ಬರಿದಿಗಿಲು ! ಮಿದುಳ ಪರೆ
ಮಂಜು ಹಿಡಿದ ಪರಿ ನಸು-ಒಪ್ಪೆ ;
ಇರುಳ ಸ್ವಪ್ನದೊಳು ಬ್ರಹ್ಮಚಾರಿಯಿಹೆ-
ನೆಂಬ ಮಾತನೆಯ ಮರೆತಿದ್ದೆ.
ನಿನ್ನೆ ಸಂಜೆಯಲಿ ಕಮಲಮುಖಿಯ-ನಸು
ಇಣುಕಿದುದನೆ ಈಗರಿತಿದ್ದೆ.

**—ಚಿದಂಬರ ದೀಕ್ಷಿತ**

## ಪಣತಿ * * * *

### ೧

ನೂರು ಹೃದಯದ ಮೇರುಭಾವಗಳ ನೂರಾರು ಸಾಲುದೀಪ
ಹೊತ್ತಿ ಉರಿದಿವೆ ಸುತ್ತು ಕತ್ತಲೆಯ ಕೂಪದಲಿ—
ಒಂದು ಚಣ, ಬೆಳಕು ನಗೆ ನಲಿವು ಸಲ್ಲಾಪ;
ಮರುಗಳಿಗೆ 'ಆ' ಎಂದು ಅಂಧಕಾಸುರ ಬಂದು
ಕೊಳ್ಳೆ ಹೊಡೆಯಲು ಕೇಳಿ ಬರುವದೊಂದೇ ಸೊಲ್ಲು
ಅಣುಕಣದ ವಿಪ್ರಲಾಪ!
ಸುತ್ತು ಕಂದಕ ತೋಡಿ ಮುಳ್ಳು ತಂತಿಯ ಬಿಗಿದು
ಭದ್ರವಾಗಿಯೆ ಕಾವಲಿಟ್ಟರೂ ಬಿಟ್ಟರೂ
ನುಗ್ಗಿ ಬಂದೇ ಬಿಡುವನಲ್ಲ ಈ ಭೂಪ!

ಬಿಳಿಯ ಗೋಡೆಯ ಮೇಲೆ ನೆರಳು ಬಂದಾಡುವವು
ಕುಣಿಸುವನು ಕಿಳ್ಳಿಕೇತ.
ನೆತ್ತಿಯಲಿ ಸುರುಳಿ ಸುತ್ತಿ ಮಲಗಿವೆ ಮೊದುಳು....ಬಡಪಾಯಿ
ಚಿತ್ತವೆತ್ತೋ........ಅದರ ಧ್ಯಾನವೆತ್ತೋ........ !
ಕೆಸರು ಮೆತ್ತಿದ ಕಾಲನೆತ್ತೆತ್ತಿ ಇಡುತಿಹುದು ಗಾಣದೆತ್ತು.
ಹಾಳುಗೋಡೆಯ ಬದಿಗೆ ಕಾಲು ಜೋಡಿಸಿ ನಿಂತು
ಇಹಪರದ ದೀರ್ಘ ಆಲೋಚನೆಗೆ ತೊಡಗಿಹುದು
ಯುಗ ಯುಗದ ದೈನ್ಯವಾಣಿ,—
ಕಟ್ಟಿ ಕಾಲನು ಮೇಯಬಿಟ್ಟ ಪ್ರಾಣಿ.
ಕೆದರಿ ತಿಪ್ಪೆಯ ಕೋಳಿ ಹೆಕ್ಕುತಿಹುದೇನನೋ
ಬೆನ್ನ ಹಿಂದೆಯೆ ಕಟ್ಟಿಕೊಂಡು ತಿರುಗಿದೆ ತನ್ನ ಸರ್ವ ಬಳಗ!
ಬೆಳಗಾಗೊ ಮುನ್ನವೇ ಕೂಗುವದೆ—ಅದರ ಮನೆ ಹಾಳಾಗ ಇಷ್ಟು ಬೇಗ?
ಹಿಡಿದು ಒಂದೇ ಉಸಿರು ಒದರುತಿವೆ ಊರೆಲ್ಲ ಗಿರಣಿ ಭೋಂಗಾ.

ದಿನದ ಬೀಸುವ ಕಲ್ಲು ಗರಗರೆಂದಾಡಿಹುದು
ಬಳೆಯ ಮಂಜುಳ ರವದ ನಾದ ಹಿಡಿದು
ಇರುಳೆಲ್ಲ ಉರಿದುರಿದು ಸಣ್ಣದಾಗಿದೆ ಹಣತಿ
ಗುಡಿಸಲದ ಗೂಡಿನಲಿ ಜೀವ ಹಿಡಿದು!

೨

ಅವತಾರಗಳ ಮೇಲೆ ಅವತಾರಗಳು ಬಂದು
ಮಂಡಿಸಿದ ಭಾವಚಿತ್ರ
ಕಟ್ಟುಹಾಕಿಸಿ ಗೋಡೆಗಿಳಿದು ಮೊಳೆಯದು ಜಡಿದು
ತೂಗ ಬಿಟ್ಟಿಹರಾರೊ ಬಲು ವಿಚಿತ್ರ!
ಸುತ್ತುಮುತ್ತಲು ಪೌಳಿ ನಡುವೆ ಗೋಪುರವೇರಿ
ಮೂಡಿತ್ತು ಮುದ್ದು ಕಳಸ;
ಹರಗಿ ಹಸನಾದ ಹೊಲದಲ್ಲಿ ಬೆಳೆಯಿತು ರಾಶಿ ಧಾನ್ಯದವಸ.
ಪೂಜೆ ಸಂದಿತು ಮುಗ್ಧ ನೈವೇದ್ಯ ಸಂತೃಪ್ತಿ—
ಹಬ್ಬ ಹುಣ್ಣಿವೆಗೊಪ್ಪು ಹೊಮ್ಮಿದುತ್ಸಾಹದಲಿ
ಮೊಳಗಿದವು ಜೋಡು ಕಹಳೆ!
ಗಂಟೆ ಗಣಗಣ ನಾದ ರಿಂಗಣದಿ ನರನರವು ವಿದ್ಯುತ್ತರಂಗಮಾಲೆ!
ಬಯಕೆ ಊದಿನಕಡ್ಡಿ ಬರೆದು ಹಾಕಿತು ದಿನವು ಬಿನ್ನಹದ ಓಲೆ
ಮುಟ್ಟಿತಿಲ್ಲವೊ, ಇನ್ನೂ ಉತ್ತರವೆ ಬರಲಿಲ್ಲ
ಏನೊ ವರ್ಗಾವರ್ಗಿ ಅಲ್ಲಿ ಮೇಲೆ!
ನುಡಿಯಲೊಲ್ಲದು ದೇಹ ದೇಗುಲದ ಗಂಟೆಯುಲಿ
ಮಿಡಿಯಲೊಲ್ಲದು ಮುಖ್ಯ ಜೀವನಾಡಿ,
ಹಿಡಿದು ಸಿಕ್ಕಾಬಟ್ಟೆ ಜಗ್ಗುತಿವೆ ನೂರಾರು ಬೇಟೆ ನಾಯಿ!
ಮಡಿಯುಟ್ಟ ಪೂಜಾರಿ (ನೋಡಿರವನವತಾರ!)
ಕಾಣಿಕೆಯ ಕೊಂಡ ತತ್‌ಕ್ಷಣವೇ ಕೃತಾರ್ಥ.
ಆಮೇಲೆ ಧರ್ಮಾರ್ಥ ಹಣಿಸುವನು ಒಂದೊಂದೆ ಸೌಟು ತೀರ್ಥ
(ಗಂಗೆ ತುಂಗೆಯು ಬ್ರಹ್ಮಪುತ್ರೆ ಕಾವೇರಿಯರು ನೆರೆಬಂದು
ಹೊರಚೆಲ್ಲುತಿಹರು ವ್ಯರ್ಥ)

ಬಣ್ಣಬಣ್ಣದ ಬಲ್ಬು ಕಾಜಿನ ಗುಳಾಪುಗಳು ಕಾರ್ತಿಕವ ಹಚ್ಚಿದಿರುಳು
ಥಳಥಳಿಸುವೆರಡು ಬಂಗಾರ ಪಾದುಕೆ ಮೇಲೆ
ಆಡುತಿವೆ ಪೂಜಾರಿ ಕೈಬೆರಳು !
ಗರ್ಭಗುಡಿಯಲಿ ಪಣತಿ ಉರಿದಿವೆ ನಿರಾತಂಕ
ಬಂದು ಬಡಿದರು ನೂರು ದೀಪದ ಹುಳು !

**೩**

ಚೆಂಡುಹೂ ತುಂಬೆಹೂ ಹೊನ್ನವರೆ ಹುಚ್ಚೆಳ್ಳು-
ಸಜ್ಜೆ ಜೋಳದ ತೆನೆಗೆ ಸುಂಕವಾಡಿ
ಮಣ್ಣ ಕುಡಿಕೆಯನೊಡೆದು ಪುಟಿಯುತಿವೆ ಕಾರಂಜಿ
ಬಣ್ಣಬಣ್ಣದ ಬದುಕನೆಲ್ಲ ತೂರಿ !

ಗುದ್ದುತಿದೆ ಗಾಳಿಯನು ಸುಮ್ಮಸುಮ್ಮನೆ ಮದ್ದು
ಒದ್ದಾಡುತಿವೆ ಒಳಗೆ ಚಟಪಟಾಕಿ ;
ಹೊತ್ತಿ ಸುರುಸುರು ಬತ್ತಿ ನಕ್ಷತ್ರ ಸೂಸುತಿವೆ
ಗೊತ್ತಿಲ್ಲವೇ ಇಂದು ದೀಪಾವಳಿ !

ಗುರಿಯಿರದ ಸುರುಬಾಣ ಹಾರಿವೆ ಢಪಲ್‌ಬಾಜಿ
ಆಟದಾಟಂಬಾಬಿನಾ ಸ್ಫೋಟನ!
ಒಂದೊಂದಕೂ ಸ್ಪರ್ಧೆ 'ನಾ ಮುಂದೆ ನೀ ಮುಂದೆ'
ಸಾಲಬಹುದೇ ಒಂದು ಜೀವಮಾನ ?

ಮುಗಿಲು ಝುಗಝುಗ ಮಿಂಚಿ ಹೊಡೆದುಕೊಂಡಿತು ಸ್ನ್ಯಾಪು
(ಸಿಗಲಾರದಿನ್ನಿಂಥ ಜಗದ ಭಂಗಿ !)
ಬಿರುಗಾಳಿ ಬೀಸಿ ಮಳೆ ಹೊಯ್ದು ಗುಡುಗುಡಿಸಿತ್ತು
ಸಿಕ್ಕ ಬೇಟೆಯ ಸಿಡಿಲು ತಿಂದು ತೇಗಿ !

ಮರ ಮುರಿದು ಬಿದ್ದು ಕಬ್ಬಿಣ ಕಂಬ ನೆಲಕೊರಗಿ
ಹರಿದು ವಿದ್ಯುತ್ತಂತಿ ದೀಪವಾರಿ

ಕತ್ತಲೆಯು ತುಂಬಿ ಹೊರಚೆಲ್ಲುವ ಗಟಾರದಲಿ
ಕೊಚ್ಚಿ ಹೋಯಿತು ಪಾಪ, ಮುದ್ದು ಕುನ್ನಿ !

*           *           *           *

ತಲೆ ತಲಾಂತರದಿಂದ ತೈಲನೆರೆಯುತ ಬಂದು
ಸೊಡರು ಕುಡಿಯಾಡಿಸಿದೆ ಮಣ್ಣ ಹಣತಿ,—
ನೆಲ ಬಾನಿಗೊಂದೆ ದೀಪಾವಳಿಯ ಸೇತುವೆಯ
ನಿಲಿಸಿ ಉದ್ಘಾಟಿಸಲಿ 'ಜ್ಯೋತಿಷಾಂ ಜ್ಯೋತಿ' !

—ಚೆನ್ನವೀರ ಕಣವಿ

# ಪಡುಗಡಲು * * *

೧

ಇದೋ ಕಡಲು !
ಅದೋ ಮುಗಿಲು !
ಬಾಯ್ದೆರೆದಿವೆ ಒಂದಕೊಂದು ಅನಂತತೆಯ ಹೀರಲು !
ಎನಿತೆನಿತೋ ಹಗಲು ಇರುಳು
ತೆರೆಗಳ ಹೆಗಲೇರಿ ಬರಲು
ನೆಲವನಳಲಮಳಲಿನಲ್ಲಿ ಹುಗಿದು ಮುಂದೆ ಸಾಗಿವೆ !
ಋತುಋತುಗಳು ಓತು ಬಂದು
ನದೀ ಮುಖದಿ ಕೂಗಿವೆ !
ಬೆಟ್ಟ ಬೆಟ್ಟ ಬೆಂಬಳಿಸಿವೆ--
ಗುಟ್ಟನರಿಯದಂತಿವೆ ;
ಘಟ್ಟವೇರಿ ಘಟ್ಟವಿಳಿದು ಹಸಿರು ಪಟ್ಟವೇರಿದೆ !
ಬಾನಿನೆದೆಯ ಭವ್ಯತೆಗಿದೋ
ಕಡಲು ಹಿಡಿದ ಕನ್ನಡಿ !
ಬೇಡ ಬೇರೆ ಮುನ್ನುಡಿ.

೨

ಆಗೋ ಅಲ್ಲಿ !
ಉಸಿರ್ಗಟ್ಟಿ ದ್ವೀಪ ಮೇಲಕೆದ್ದಿವೆ
ನೀಲನಿದ್ದೆ ಗೈದಿವೆ.
ಹಾಯಿ ಬಿಚ್ಚಿ ಹಾಯಾಗಿವೆ
ದೋಣಿ ತೆರೆಯನೇರಿವೆ ;
ನೀರಿನಲ್ಲಿ ರಂಟೆ ಹೊಡೆದು ಹಡಗು ಕ್ಷಿತಿಜವಡರಿದೆ !
ಕೊರೆದ ಹರಿದ ನೀರಘಾಯ
ಮಟಾಮಾಯವಾಗಿವೆ.

ಈ ಪಡುವಣ ತೀರದಲ್ಲಿ
ತೀರದಂಥ ಮೊರೆತವೊ!
ಆ ಖಾತವೊ ಭೂಶಿರವೊ
ತೇಲುತಿರುವ ತೆಪ್ಪವೊ
ದೇಶಾಂತರದಾಶೆಪೀಚಿ ಇದರುದರದಿ ಬೆರೆತವೊ !
ತೆರೆತೆರೆಗಳು ಬಂದರದಲಿ ನೊರೆಯ ತೂರಿ ತೂರಿ
ಬರೆಯುತ್ತಿವೆ ದಿನಚರಿ !

೩

ಅಲೆ ಅಲೆ ಅಲೆ ತೇಲಿ ಬರುವದಲ್ಲ ದೋಣಿ ಬಿನದ!
ಅಂಬಿಗರುಲಿ ನಿನದ;
ತುಣುಕು ಮೀನು
ಮಿಣುಕು ಮೀನು
ಅಣಕಿಸಿ ಪಾರಾದವೇನು ?—
ಬಿದ್ದವದೋ ಬುಟ್ಟಿಗೆ
ರಾಶಿ ರಾಶಿ ಒಟ್ಟಿಗೆ !
ಮೀಂಬುಲಿಗನ ಹಕ್ಕಿ ಕೊಕ್ಕಿನಲ್ಲಿ ಕಚ್ಚಿ ಹಾರಿತು
ಬಲೆಗೆ ಬಿದ್ದ ಮೀನು ಮಾತ್ರ ವಿಲಿವಿಲಿ ಒದ್ದಾಡಿತು !
ಬೊಕ್ಕು ತಲೆಯ, ಬರಿಮೈಯ
ಮಕ್ಕಳು ಮುಗಿಬಿದ್ದಿವೆ
ಅವರ ಪಾಲಿಗಷ್ಟು ಇಷ್ಟು ಕಡಲು ಕೊಟ್ಟ ಕಾಣಿಕೆ
ಮತ್ಸ್ಯಗಂಧಿಯೋಜನಸುಗಂಧಿಯಾದಳೆಂಬ ವಾಡಿಕೆ !

೪

ಮೊನ್ನೆ ಮೊನ್ನೆ ಯುದ್ಧವಾಯ್ತು ಮನುಕುಲದುದ್ಧಾರಕೆ !
ಕಳೆಯಲೆಂದೆ ಬಂದಿತೆನ್ನಿ
ದೇಶ ದಿಗ್ದೇಶಗಳ,
ಶಾಂತಿಯ ಬಾಯಾರಿಕೆ ;

ನೆಲ ಬಾನ್ಗಳು ಸಾಲಲಿಲ್ಲ
ಕಡಲಿಗು ಕಿಡಿ ಸಿಡಿಯಿತು !
'ಉದ್ಧರೇದಾತ್ಮನಾತ್ಮಾನಂ'
ಜಲಸುರಂಗ ಹಬ್ಬಿತು !
ಹಡಗು ಹಡಗು ಬುಡಮೇಲು
ಸುತ್ತು ತೋಪುಗಾವಲು ;
ನಾಗರಿಕತೆ ಮುಗಿಲಿಗೇರಿ
ಬಾಂಬಿನ ಮಳೆಗರೆಯಿತು
ಆಗಸವೇ ಅದುರಿತು !
ಕಡಲು ದಂಡೆಗಪ್ಪಳಿಸಿತು—
ಚಪ್ಪರಿಸಿತು ನಾಲಗೆ
ಈ ಯುದ್ಧದ ಮದ್ದುಗುಂಡು
ಸಾಲಬೇಕು ಅದರ ಯಾವ ಮೂಲೆಗೆ ?

೫

ಇದೋ ಕಡಲು
ಅದೋ ಮುಗಿಲು
ಬಾಯ್ದೆರೆದಿವೆ ಒಂದಕೊಂದು ಅನಂತತೆಯ ಹೀರಲು
ಉರುಳುತ್ತಿಹ ಭೂಗೋಲಿನ ಆಯುಷ್ಯವು ತೀರಲು
ಅದೂ ಬೊಕ್ಕ ಬೋರಲು !

—ಚೆನ್ನವೀರ ಕಣವಿ

# ದೇವಾಲಯದಲ್ಲಿ ಬಾಲವಿಧವೆ * *

ಏನನ್ನು ಬೇಡುತಿಹಳೋ !
ದೇವನಲ್ಲೇನನ್ನು ಕೇಳುತಿಹಳೋ ! ||ಪ||

೧

ಜೀವನದ ಜ್ಯೋತಿಯುಗು ನಂದಿ ಹೋಗಿಹುದು
ಸಾವವಳ ಸೌಭಾಗ್ಯವನ್ನು ಸೆಳೆದಿಹುದು
ನೋವ ಕಡಲೊಳಗೆ ಮುಳುಮುಳುಗಿ ಏಳುವಳು.—
ಏನನ್ನು........

೨

ಮೂಢ ರೂಢಿಯು ಬೇಡಿಯವಳ ಬಿಗಿದಿಹುದು
ಕಾಡು ನಡತೆಯು ಭೂತ ಬೆನ್ನು ಹತ್ತಿಹುದು
ಬೇಡಾದ ಬಾಳುವೆಯು ಬಯಲಿನಲಿ ನಿಂತು.—
ಏನನ್ನು........

೩

ಸರ್ವೇಶ್ವರನ ನಾಮವನು ಜಪಿಸುತಿಹಳೋ
ಸರ್ವ ಘಾತಕಿಯೆಂದು ವಿಧಿಯ ಶಪಿಸುವಳೋ ?
ಸರ್ವ ನಾಶವಗೈದ— "ಪುರುಷ" ನೆನ್ನುವಳೋ ?
ಏನನ್ನು........

೪

ಕಿಡಿಯ ಕಾರುತಲವಳ ಶೋಕ ಮಿತಿಮೀರಿ
ಸುಡುವುದೀ ಲೋಕವನ್ನಾಕಾಶಕೇರಿ
ಕಡಿದು ಬೀಳುವದವಳ ಬಿಗಿದಿರುವ ಬೇಡೀ
ಏನನ್ನು........

—ಜಿ. ವ್ಹಿ. ಕಟ್ಟಿ

# ಬಡತನದ ಮಾರಿ * * * *

ಹುಚ್ಚೆದ್ದು ಕುಣಿತಾಳ ಬಡತನದಽ ಮಾರಿ || ||ಪ||

೧

ಕಲಿಗಽಳ ಕೆಚ್ಚೆದೀ ಮ್ಯಾಲೀ ಕಾಲೂರಿ |
ಕಿಡಿಗಽಳ ಕಾರಿ |
ತನ್ನಽ | ಕಾಳರಾತ್ರಿಯ ಕಪ್ಪು ಮೈಬಣ್ಣ ತೋರಿ ||
ಹುಚ್ಚೆದ್ದು........

೨

ಕಪಿಯಽ ಕೈಯಾಗೀನ ಕೊಳಲೂ ತುತೂರಿ |
ಗಾಳೀಗೆ ತೂರಿ |
ಅವನಽ | ಕನಸಽದ ದಿವ್ಯ ಶಕ್ತಿಯನೆಲ್ಲಾ ಹೀರೀ ||
ಹುಚ್ಚೆದ್ದು........

೩

ಸಾವೀನ ಸರವೊಂದು ಕೊರಳಾಗಽ ಹಾಕೀ |
ಹೊಡಿಯೂತ ಕ್ಯಾಕೀ |
ಮ್ಯಾಲಿಽ | ಹಾರೀಸಿ ಹಸಿವೀಯಽ ಹಿರಿಯಽ ಪತಾಕೀ ||
ಹುಚ್ಚೆದ್ದು........

೪

ದುಡಿಯೂವ ಧೀರಽನ ಮೈಮೂರಿ ದುಡಿಸೀ |
ದೂಳೀಯನುಣಿಸೀ |
ಅವನಽ | 'ಬಾಳೀದು ಹಾಳೆ'ಂಬ ರಾಗಕ್ಕಽ ಕುಣಿಸೀ ||
ಹುಚ್ಚೆದ್ದು........

೫

ಮಾರೀಯಽ ಕುಣಿತಕ್ಕ ಸಿಡಿಲೀನಽ ತಾಳಾ |
ಗುಡುಗೀನಽ ಮ್ಯಾಳಾ |
ಗಽದ | ಗದ ನಡುಗಿದವಯ್ಯಾ ಭೂಮೀ ಪಾತಾಳಾ
ಹುಚ್ಚೆದ್ದು.......

೬

ಚೆಲುವಽದ ಮಾರೀಗೆ ಮುಸಕೊಂದು ಹೊಚ್ಚೀ ।
ದವಡೀಯ ಕಚ್ಚೀ ।
ಅವದಽ । ಛಂದಽದ ಸಂಸಾರಾ ಕ್ವಾರೀಲಿ ಚುಚ್ಚೀ ॥
ಹುಚ್ಚೆದ್ದು……..

೭

ಹುರುಪೀನಽ ಹುಡುಗಽರ ಹೆಡಮುರಿಗೀ ಕಟ್ಟೀ ।
ಕಾಲಾಗಽ ಮೆಟ್ಟೀ ।
ಅವದಽ । ಸವಿಗನಽಸಿನದೊಂದು ಗೋರೀಯಽ ಕಟ್ಟೀ ॥
ಹುಚ್ಚೆದ್ದು……..

೮

ರಕ್ತಽದ ಪಟ್ಟೆಕುಂಕುಮ ಹಽಣೆಗ್ಹಚ್ಚೀ ।
ಕೆಂಜೆಡೀ ಬಿಚ್ಚೀ ।
ತನ್ನಽ । ಅಕ್ರಾಳ ನಿಕ್ರಾಳ ರೂಪಕ್ಕೆ ಮೆಚ್ಚೀ ॥
ಹುಚ್ಚೆದ್ದು……..

೯

ಕೋಲ್ಮಿಂಚು ಹೊಡಧಾಂಗ ಮುಗಿಲೀಗೆ ಹಾರೀ ।
ತಿರನ್ರೂತ್ಯ ಚೂರೀ ।
ಆಹಾ । ಭಾಳಿದ್ದು ಕೋಳ್ಳ ಅಸ್ಕೃತ ಚೇರೀ ॥
ಹುಚ್ಚೆದ್ದು……..

—ಜಿ. ವ್ಹಿ. ಕಟ್ಟಿ

## ಬೇಡಿಕೆ * * * *

೧

ತೆರತೆರದ ಹೂಗಿಡಗಳಿಂದ ಶೋಭಿತಮಾಗಿ
ಕರಮೆಸೆಯುವಂದಚಂದದ ಬಿರಿದ ಹೂಗಳಿಂ
ದರಸಿಕರನಾದೊಡೆಯು ಸಲೆ ಕೊಳ್ವ ಪೂಗೊಳದ ಬನವೊಂದ ನೀಡು ದೇವ!

೨

ಅಂತಿರುವ ಬನದ ಪೂಗೊಳದ ತೀರವ ಸೇರಿ
ಸಂತಸಂಗೊಂಡು ಬನಸಿರಿಯನೀಕ್ಷಿಸುತಿರಲು
ಅಂತಿಹುದನೆಲ್ಲವನು ಪಿಂದೆಸೆವ ಸೌಂದರ್ಯ ಸಾಮ್ರಾಜ್ಯದರಸಿ ಬರಲಿ!

೩

ಅಂತಿರುವ ಸೊಬಗುಗಣಿ ನಡೆದೆಯ್ದುತಿರಲಾಗ
ಅಂತವಿಲ್ಲದ ಸೊಬಗು ಹೊನಲಾಗಿ ಹರಿಯುತಿರೆ
ಎಂತು ಆ ಸೌಂದರ್ಯಪೀಯೂಷವೀಂಟುವೆಂ ಅಂತೆಸಗು ಕಂತುಜನಕ.

೪

ಬಿಡುಗಣ್ಣನನು ಮಾಡು ದೇವ ಕರುಣದಲೆನ್ನ,
ಬಿಡದೆಯೆವೆಯಿಕ್ಕದೆಯೆ ನೋಡಬಯಸುವೆನದನು,
ಸಡಗರದೆ ಮಿರುಗುತಿಹ ರೂಪರಾಶಿಯನದನು ಮನದಣಿಯೆ ಕಾಣಲೆಳಸೆ.

—'ಜಯದೇವ'

# ಕನಸು

* * * *

೧

ಪೇರಲೆಗಳೇರೇರಿ ಭರದೆ ಬರುತಿರಲು
ಜಲಚರಗಳಿರದೆ ಮೇಲೆಯ್ಯುತಲಿ ಇರಲು
ತಾರಣದ ತೆರವೆನಗೆ ತೋರದಾಗಿರಲು
ಬಾಳಿನಾಸೆಯದಳಿಯೆ ಅರಿವುವಪ್ಪಿರಲು—

೨

ಹರಿಯ ಮಹಿಮೆಯದೆನಿತಗಮ್ಯವಾಗಿಹುದು
ಆರು ಅರಿಯುವರವನ ಕರುಣೆಯಾಳವನು ?—
ಮರವೆಯರಿತಾನಿನಿಸು ಕಣ್ದೆರೆಯಲಾಗ
ಕಂಡೆ ಕಟ್ಟಿಗೆ ತುಂಡನೊಂದು ಬರುವುದನು !

೩

ಜೀವಿಸುವ ಬಯಕೆಯದು ಮರಳಿ ಮೊಳೆತಿರಲು
ಅದನು ಹಿಡಿಯುವ ಹವಣೆಯಿಂದಲೀಸಿದೆನು ;
ಆಪ ದೆಸೆಯಿಂದಕಟ ತೆರೆಗಳೈತಂದು
ಮತ್ತಿನಿಸು ದೂರೆಸೆದು ಬಿಟ್ಟವಯ್ಯದನು !

೪

ಮುಟ್ಟುವೆನು ಇಲ್ಲಿ ಇದೆ ! –ಎಂದು ಸಾಗಿರಲು
ಮುಟ್ಟಿದೆನು ಎಂದಂದು ಉಬ್ಬುವನಿತರೊಳು,
ಕೆಟ್ಟ ತೆರೆಯೊಂದೆಯ್ದು ಅದನೆ ಕಸಿದೊಯ್ದು
ಬಿಸುಟಲೇಪೇಳ್ವೆ ನನ್ನಾಳವಳಿದ ಗೋಳು !

೫

ಬಳಲಿಹೆನು ಬೆಂದಿಹೆನು ನೊಂದು ಕುಂದಿಹೆನು
ಮೈಮನಗಳೆರಡು ಬಲವಿಲ್ಲದಾಗಿಹವು,
ಸೆಳೆಮಿಂಚು ಹೊಳೆದಡಗೆ ಕಾಳು ಕವಿಯುವ ಪೋಲು
ಸೆಕ್ಕಿ ಕೈಬಿಟ್ಟಗಲೆ ಬನ್ನ ಬೆಳೆದಿಹುದು.

—'ಜಯದೇವ'

## ಬೇಸರ * * *

೧

ಭಾವಭಾಗೀರಥಿಯು ವೇಗದಲಿ ಹರಿಯುತಿರೆ ಒಂದು ಹಣ್ಣೆಲೆಯನ್ನು ತೂರಿಬಿಟ್ಟೆ!
ದಡದ ಗಲುಗಲಿ ಸಿಲುಕಿ ಇಲ್ಲಿಯೇ ನಿಲ್ಲುವದೊ ?
ಹರಿಹದೊಡನಾಡುತ್ತ ಸಾಗರಕೆ ಸಲ್ಲುವದೊ ?
ನೋಡಲಿಕೆ ಮನಸೆ ಇಲ್ಲ !

೨

ಜೀವನದ ಜೂಜಿನಲಿ ಲೆತ್ತವನು ಗುಳುಗುಳುಸಿ ಹೇಗೇನೊ ಸೂರಿಬಿಟ್ಟೆ !
ಲೆಕ್ಕವೆಷ್ಟೆಂಬುದನು ಪರಿಕಿಸಲು ಎದೆಯಿಲ್ಲ !
ಗೆಲವು ಸೋಲುಗಳನ್ನು ನೆನಪಿಡುವ ಮುದವಿಲ್ಲ!
ಕೈಜಾರಿ ಹೋಯಿತಲ್ಲ !

೩

ಎದೆಯೊಳಗೆ ಮುಡುಪಿಟ್ಟ ಚಿನ್ನವಿಗ್ರಹವನ್ನು ಯಾಕೇನೊ ಮಾರಿಬಿಟ್ಟೆ !
ಬೆಲೆಯನ್ನು ಪಡೆಯಲಿಕೆ ಹಸ್ತಗಳು ನಡುಗುತಿವೆ !
ನಾಡಿನಾಡಿಗಳೆಲ್ಲ ಮರುಕದಲಿ ಮಿಡುಕುತಿವೆ!
ಜೀವದಲಿ ಜೀವವಿಲ್ಲ !

೪

ಉಂಡ ಸವಿಯನ್ನವನು ಯಾವ ಬನ್ನದೊಳೇನೊ ಇನ್ನೊಮ್ಮೆ ಕಾರಿಬಿಟ್ಟೆ !
ಹಸಿವೆಯಾಯಿತು ಮತ್ತೆ, ರುಚಿಮಾತ್ರ ಹಿಂಗಿಹುದು !
ಕಾಮನೆಯ ಬಟ್ಟಲಲಿ ಬೇಸರವು ತಂಗಿಹುದು !
ಎಲ್ಲೆಲ್ಲು ಸರಸವಿಲ್ಲ !

೫

ದೇವನಾಣತಿಯಿಂದ ಕೊರೆದಿಟ್ಟ ಗೆರೆಯನ್ನು ಅರಿದರಿದು ಮೀರಿ ಬಿಟ್ಟೆ !
ಕ್ಷಿತಿಜದಾಚೆಗೆ ಆವ ಸ್ವರ್ಗವಿದೆ ನಾನರಿಯೆ !
ಆ—ಯೆಂದು ಬಾಯ್ದೆರೆದ ನರಕವಿದ್ದರು ಸರಿಯೆ—
ಬಂದುದನು ಸಹಿಪೆನಲ್ಲ !

—ಶಂ. ರಾ. ಮೊಕಾಶಿ

# ನೆರಳು ಬೆಳಕು

* * * *

ಬೆಳಕಿಗೆ ಬೆನ್ನು ಮಾಡಿ ನಡೆಯುತಿರೆ
ನನ್ನ ನೆರಳನ್ನು ಎಡಹುವೆನು !
ಬೆಳಕಿನತ್ತ ತಿರುಗಲೇ ?—ಕಣ್ಣು ಕುಕ್ಕುವದು !
ಬೆಳಕೇ ಕತ್ತಲಿಸ ಹೊರಟಾಗ ಕಣ್ಣ ಕಥೆಯೇನು ?
ಕಣ್ಣು ಕಟ್ಟಿಸುವ ನೆರಳು !
ಕಣ್ಣು ಕುಕ್ಕಿಸುವ ಬೆಳಕು !—
ಎಡಗೈ ಬಲಗೈಯೊಡನೆ ಕಾದಾಡುವಾಗ ಸುಡುಗಾಡಸಿದ್ಧನು
ಕಡುಬನ್ನೆಂತು ತಿಂದಾನು ?
ತಂದೆ ತಾಯಿ ಕಾದಾಡುವಾಗ ಚೆನ್ನಯ್ಯನೆಲ್ಲಿ ಅಡಗಬೇಕು ?
ನಾನಾರ ಮೊರೆ ಹೋಗಲಿ ?—
ನಡುವೆಯೇ ನಿಲ್ಲುವೆನು !
ಎರಡು ಸತ್ಯಗಳ ನಡುವಿನ ಇಡುಕಿರಿನಲ್ಲಿಯೇ ನನ್ನ ಗುಡಿಸಲು
ಹೂಡುವೆನು !
ಏಕೆಂದರೆ, ನೆರಳೂ ಸತ್ಯ ! ಬೆಳಕೂ ಸತ್ಯ !
ಸತ್ಯಗಳ ಹೋರಾಟ ಬಲು ಕಠಿನವಯ್ಯಾ !
ಕರ್ಣಾರ್ಜುನರು ಕಾದಾಡುವಾಗ ಯಾರ ಬೆನ್ನು ಕಟ್ಟುವಿ ?
ಸತ್ಯಗಳ ಕಾದಾಟಕ್ಕೆ ಕೊನೆಯೆಲ್ಲಿ ?
ಕಾಗದದ ಕಳಸವಳಿದಾಗಲೇ—
ಆಕಾಶಬುಟ್ಟಿಗೆ ಉರಿಹತ್ತಿದಾಗಲೇ—
ನಕ್ಷತ್ರ ಕರಗಿ ನೆಬ್ಯುಲಾ ಆದಾಗಲೇ—
ಈ ಹೋರಾಟ ಮುಗಿಯುವದು !

ಆಗ,—

ಒಂದಕ್ಕೊಂದು ತೆಕ್ಕೆಬಿದ್ದ ನೆರಳು ಬೆಳಕುಗಳು ಚಿರಂತನ
ಕುರುಡಿನಲ್ಲಿ ಅಡಗುವವು !

ಕಣ್ಣನ್ನು ದಯಪಾಲಿಸಿದ ದೇವನಿಗೆ ಕಣ್ಣಿಲ್ಲವಯ್ಯಾ !
—ಅವನೇನು ಬಲ್ಲ ಕಣ್ಣಿದ್ದವರ ಬವಣೆಯನು ?
ಅಂತೆಂಯೇ ಅವನು ದೇವ, ನಾವು ಮನುಜರು !

ಎಂದು ನನ್ನ ಕಣ್ಣಾಳಿಯುವದೋ
ಅಂದು ನಾನು ಎತ್ತ ಹೋದರೂ ಸರಿ !
ಬೆಳಕೂ ನನ್ನದೇ, ನೆರಳೂ ನನ್ನದೇ !

—**ಶಂ. ರಾ. ನೊಕಾಶಿ**

# ಎರಡು ಹಕ್ಕಿ

*　　*　　*

೧

ಮರಮುದಿಯ ಮೇಲೆರಡು
ಮೆರೆಯುತಿವೆ ಎಳೆವಕ್ಕಿ;
ಒಂದು ಫಲ ತಿನ್ನುತಿದೆ
ಒಂದು ನಗೆ ಬೀರುತಿದೆ.

೨

ಜೀವನದ ಗಿಡದಲ್ಲಿ
ಜೀವ ದೇವಗಳೆರಡು
ಒಲಿದುಯ್ಯಲಾಡುತಿವೆ
ನಲಿನಲಿದು ನೋಡುತಿದೆ.

೩

ಜೀವಪಕ್ಷಿಯು ತಿನಲು
ಭವಜನ್ಯಫಲವನ್ನು
ದೇವಪಕ್ಷಿಯು ಭವ್ಯ
ನಗೆಯನದು ಬೀರುತಿದೆ!

೪

ಹಸಿದರುಣ್ಣುವ ಆಸೆ
ಹಸಿಯದೆಲ್ಲಿಯ ಆಸೆ?
ಜೀವಕಿದೆ ಭವದಾಸೆ
ದೇವಗೆಲ್ಲಿದೆ ಆಸೆ?

—ರುದ್ರ

*    *    *    *

ಸಾಕು !
ಈ ಒದ್ದಾಟ, ಗುದ್ದಾಟ, ಮುದ್ದಾಟ ಸಾಕು.
ಆಫ್ರಿಕೆಯ ಕಾನನವು ಕರೆಯುತಿದೆ—
ಸಹರಾದ ಮರುಭೂಮಿ, ಮೆಕ್ಸಿಕೋ ಪರ್ವತನವು,
ಐಸಲ್ಯಾಂಡ ನಡುಗಡ್ಡೆ ಕರೆಯುತಿವೆ—
ಕೈಯೊಂದು ಬಾಯೆಂದು ಕರೆಯುತಿದೆ.
ಬರೆವೆ, ಬರೆದೆ, ಬರೆದೆ ಹಗಲೆಲ್ಲ—
ಹೆಗಲಲ್ಲಿ ನೋವು; ಮನವೆಲ್ಲ ಬರಿದು.
ಮನಬಂದಂತೆ ನಾ ತೊನೆಯಲೆಂತು ?
ಬಂದೆ....ಕೊನೆಗೆಲ್ಲಿ ?....ಮನೆಗೆ ಬಂದೆ.
ಕೂತಿಹುದು ನನ್ನ ವಿಧಿ, ಕೈ ಹಿಡಿದ ಸಾಧ್ವಿ.
ಹೋದೆ, ಪ್ಪೈ ಹಿಡಿದು ಸೋತೆ.
ಬೇಕು ! ಬೇಕು ! ಬೇಕು !
ಈ ಮಾಂಸ, ಈ ತೋಳು, ಈ ಗೋಳು, ಈ ಕಣ್ಣು
ಗೋವಿನಂತಿಹುದೆನ್ನ ಹೆಣ್ಣು....
‘ ಹೇ, ನಿನ್ನ ಪ್ರೇಮದ ಅಮೃತವ ಕುಡಿದು,
ನಾನಮರನಾದೆ, ನಾ ಧನ್ಯನಾದೆ. ನೀ ಗಂಗೆ.... ’
ಹಾಡಿದೆ, ಅರಣ್ಯದಲಿ ಹಾಡಿದೆ, ಮಂಗನೊಲು ಆಡಿದೆ....
ಕತ್ತಲಲಿ ಕೈಯು—
ಕೈಚಾಚಿ ಕರೆಯುತಿದೆ ಕತ್ತಲೆಯ ಕೈಯು
ಸೆಳೆಯುತಿದೆ—ನಾನವಳ ಸೆಳೆದಂತೆ,—‘ ಬಾರಲ್ಲಿ ಹತ್ತಿರಕೆ ’.
ಸಾವು !
ಒಲ್ಲೆ ಸಾವಿನಾ ಬಾವಿಯಲಿ ಬೀಳಲೊಲ್ಲೆ....‘ ನಲ್ಲೆ ’.
‘ ಮುಗಿಲು ಚಿಕ್ಕೆಗಳಾಚೆ, ದಿಕ್ಕು ದಿಕ್ಕುಗಳಾಚೆ
ಏನಿಹುದೊ ಏನೊ,—ಕತ್ತಲೆಯ ಗರ್ಭದಲಿ ! ’
ಬರಿದೋ ಬರಿದು !

‘ ಎಲೆ ನಕ್ಷತ್ರ ! ’ ( ನನ್ನದು ಮೂಲಾ )
‘ ನಸಜಿಳಕಿನ ಚಿಂದಿಯೆ, ಅಡಗು, ಅಡಗು !
ಈ ಒಣಬೆಡಗಿನ ಹೊರಮುಸುಕು
ಯಾಕೆ ?
‘ ಏನದು ? ಯಾಕೆ ? ’—ಕೇಳಿದಳು ನನ್ನಾಕೆ.
‘ ಏನಿಲ್ಲ, ಅಹಾ ! ನಿನ್ನ ಕಣ್ಣೆಂಬರಿ ನಕ್ಷತ್ರ
ನಿನ್ನ ತುಟಿಯಲ್ಲಿದೆ ಸುರಲೋಕ
ಸುಮ್ಮನಿರು ಬಿಗಿದಪ್ಪು—ಬಿಗಿ.... ’
ಎಷ್ಟು ದಿನ ಈ ಸೋಗು, ಈ ಕೊರಗು ?
ಹೃದಯದಲಿ ಬೀಳುತಿವೆ ಬಿರುಕು—
ನೀರು ! ನೀರು ! ನೀರು !
‘ ಎಲೆ ನೀರೆ, ಏನೆಂದಿ ? ಹೊಸ ನೀರೆ ಬೇಕೆ ?
ಮರುಳೇ, ಐಂದ್ರಧನುಸ್ಸಿನ ಸೀರೆಯ ಹೆಣೆವೆ.
ನೀನೇ ನನ್ನಯ ಮುಕ್ತಿಯು, ಹೆಣ್ಣೇ ! ’
ಅಗೊ, ದೂರದಲಿ ಕಾಣುತಿಪೆ ನನ್ನ ಹೆಣ
ಕಣ್ಮುಚ್ಚಿ, ಬಾಯ್ದೆರೆದು, ನಿಶ್ಚಿಂತೆಯಾಗಿ —
ಕೂಸಿನೊಲು ಮಲಗಿಹುದು, ಓಂ ಶಾಂತಿಃ !
ಶಾಂತಿಃ ಶಾಂತಿಃ ಶಾಂತಿಃ
ಅದು ನನ್ನ ಮುಕ್ತಿ, ಮುಕ್ತಾಯ, ನಿರ್ವಾಣ !
‘ ಚಿನ್ನೆ, ಬಾರೆನ್ನ ಜೇನೇ, ಹೆದರದಿರು—
ನಿನಗಿಹುದು ಸಾಕಷ್ಟು ಹೊನ್ನು.... ’
ನನಗಿಹುದು ಭೂಮಾತೆ—ಮಣ್ಣು—
ತಂಪು ! ತಂಪು ! ತಂಪು !
‘ ಸಖಿ, ಪಂಖದ ಸ್ವಿಚ್ಚನ್ನೊತ್ತು
ಗಾಳಿಯು ಆಡಲಿ ತಂಪು ! ’

—ಶಾಂತಿನಾಥ ದೇಸಾಯಿ

# ಅಹಲ್ಯೆ * * * *

ಆ ದಿನ....ಒಂದಾನೊಂದು ದಿನ
ನಾನು ಕಲ್ಲಾದೆ
ಗೌತಮನ ರೌದ್ರ ಶಾಪಕ್ಕೆ ಈಡಾದೆ
' ಕಲ್ಲಾಗು, ಕಲ್ಲಾಗು. '
ಕಣ್ಣೀರು ಹರಿಸಿದ್ದೆ, ಸೆರಗೊಡ್ಡಿ ಬೇಡಿದ್ದೆ:
' ನಿರ್ದೋಷಿ ನಾನು, ನಿಷ್ಪಾಪಿ ನಾನು. '
ನನ್ನೊಲವಿನ ಪೂರ್ಣತೆಯೆ ಮುಳುವಾಯಿತೆನಗೆ.
ಅರಿವಿಲ್ಲದೆ ವೈಮರೆತೆ, ಪಾಪವನು ಮಾಡಿದೆ
ಶಾಪವನು ಪಡೆದೆ—
' ಕಲ್ಲಾಗು ಕಲ್ಲಾಗು '
ನಾನಿಲ್ಲಿ ಕಲ್ಲಾಗಿ ಕುಳಿತೆ.
ಯಾರದೊ ಅಮೃತ ಸ್ಪರ್ಶಕೆ
ಕಾತರಿಸಿ ಕುಳಿತೆ.

ಎಲ್ಲಿಹುದು ಆ ಪಾಪ, ಆ ನೋವು, ಆ ನೆನವು?
ಕಲ್ಲಿನಲಿ ಕಲ್ಲಾಗಿ ಕರಗಿ ಹೋಗಿಹುದು.
ಈಗ—
ಬಂದುದನು ಅನುಭವಿಸಿ
ಬರುವುದಕೆ ಕಾದಿಹೆನು
ಬಂದುದೆಲ್ಲವು ಬರಲಿ
ದೈವಗರ್ಭವು ಹೆರಲಿ
ಎಲ್ಲ ಕೈವಾಡಕ್ಕೆ
ಎದೆಗೊಟ್ಟು ನಿಂತಿಹೆನು
ಈ ಕಲ್ಲಿನಲೆ ಕಾಣುತಿದೆ ಮತ್ತೊಂದು ಜೀವನ:
ಗಾಳಿ ಮಳೆ ಬಿಸಿಲು ಚಳಿ
ಮಿಡುಕಲಾರವು ನನ್ನ

ತುಡುಕಲಾರವು ಮನವ--
ಎಲ್ಲವೂ ಕಲ್ಲು—ಕಲ್ಲು.
ಅಹೊ ನೋಡು ಆ ಚಿಕ್ಕಿ
ಅಪಕಿಪುದು !— ಓ ಮಿಣುಕು
ಚಿರಂತನದ ಮಿಣುಕು.
ಅದನೆ ನಿಟ್ಟಿಸುತ್ತ ನಾನು
ಅದರಂತೆಯೇ ನಾನು
ಶೂನ್ಯಚಿತ್ತಳಾಗಿ ಕಲ್ಲು
ನಿಂತಿರುವೆ—ನಿಲ್ಲುವೆ.
ಭಾಗ್ಯ ಬರಲಿ ಇಲ್ಲ ಬಿಡಲಿ
ಕಲ್ಲೆ ನನ್ನ ಭಾಗ್ಯ—ಮುಕ್ತಿ.
ಕಲ್ಲಿನಲೆ ಮೂಡುತಿದೆ ಮತ್ತೊಂದು ಜೀವನ.
ಮುಕ್ತ ಜೀವನ.
ಕೆಳಗೆ ನೆಲವು ಮೇಲೆ ಬಾನು
ಅಲ್ಲಿ ಚಿಕ್ಕಿ ಇಲ್ಲಿ ನಾನು
ಯಾರು ಮೇಲು ಯಾರು ಕೀಳು ?—
ನಿಶ್ಶಬ್ದವೆರಡು ಹನಿಗಳು
ಜೀವಸಾಕ್ಷಿ ತಾರೆಯೇ
ರಾಮ ಬರಲಿ ಇಲ್ಲ ಬಿಡಲಿ
ಬಂದರೂ—
ಭವಿತವ್ಯದ ಸ್ಪರ್ಶದಿಂದ
ಪುನಃ ನಾನು ಜೀವಂತಳಾದರೂ
ಈ ಕಲ್ಲು-ಮನವೆ ನನಗೆ ಇರಲಿ
ಮುಕ್ತಿ ನನ್ನ ಭಾಗ್ಯಕಿರಲಿ....
ಕಲ್ಲೆ ನನ್ನ ದೈವ-ಪ್ರಾಣ
ಅದುವೆ ನನ್ನ ಗೌತಮನಿಗೆ
**ಪ್ರೇಮಾರ್ಪಣ.**

**—ಶಾಂತಿನಾಥ ದೇಸಾಯಿ**

# ಅರಿಸಿನದ ಹೂ * * *

೧

ಹಳದಿಹೂಗಳ ಮುಡಿದು ಹಸಿರು ತಳಿರನು ತೊಟ್ಟು
ಪಚ್ಚೆ ಪಟ್ಟೆಯನುಟ್ಟು ಗಲ್ಲಕರಿಸಿನವಿಟ್ಟು-
ದೆನಿಪ ರೂಹನು ತಾನೆ ನೋಡೆ ಪ್ರೇಮದ ಭರವು
ಮೈಮರಸೆ, ತಲೆದೂಗುತಿಹುದೀ ಜೆಳೆದ ಮರವು.
ಬನದಾಯ ಮಗಳಿವಳು ಬೆಳೆದು ನಿಂತಿಹ ಮುಗುದೆ
ಮಂದಗಾಮಿನಿ—ಅಹುದು—ಅಲ್ಲಲ್ಲ : ಗತಿಯಿಹುದೆ ?
ನಿಂತಲ್ಲಿ ನಿಂತಿಹಳು ಕತ್ತೆತ್ತಿ ನೋಡುತ್ತೆ
ಒಂಟಿಗಾಲಿನ ಮೇಲೆ—ತಪಕಲ್ಲವೈ ಮತ್ತೆ !

ತನ್ನ ತಾಯಿಯ ವಂಶವನು ಬೆಳಗಲೆಂದಿವಳು;
ತನ್ನಿನಿಯನಾಗಮನಕೆಂದು ಕಾಯುತಲಿಪಳು
ಅದೊ ಕಾಣು ! ಬಂದನದೊ ! ವನದೇವತೆಯ ಅಳಿಯ
ಪ್ರೇಮಗೀತವ ನಲಿದು ಗುಂಗುಣಿಸುತಿಹ ಅಳಿಯು
ಬಂದಿವಳ ಅರಿಸಿನದ ಹೂ ಗೆನ್ನೆ ಚುಂಬಿಸಿದ
ಇನ್ನು ಫಲವನು ಧರಿಪೆಯೆಂದಿವಳ ನಂಬಿಸಿದ.

—ವಸಂತ ಕವಲಿ

# ಅರಿಸಿನದ ಹೂ          *          *          *

೧

ಬಂದ ಶ್ರಾವಣ ಬಾನ ಬೀದಿಯಲಿ ಗುಡುಗುತ್ತ
ಅಗಲಿಕೆಯ ಕಣ್ಣೀರನೆಲ್ಲ ನೆಲದೆದೆಯಲ್ಲಿ
ಸುರಿಸಿದಷ್ಟೂ ಮತ್ತೆ ತುಂಬುತಿವೆ ಕಣ್ಣಾಲಿ
ಇಳೆಯ ಹೃದಯದಿ ಹೊರಟ ಪ್ರೇಮದಾ ಮೃದುಗಂಧ
ದಿಕ್ಕುಗಳ ತಬ್ಬುತಿದೆ. ಸಂಭ್ರಮವು ಮಿತಿಮೀರಿ
ಮೈಯಲ್ಲಿ ರೋಮಾಂಚ, ತುಟಿಯಲ್ಲಿ ಹಸಿರು ನಗೆ
ಹೊಮ್ಮುತಿವೆ; ಬಾನದೇಗುಲ ಹಸಿರು; ಇಳೆಯ ಮೈ
ಹಚ್ಚಹಸಿರಿನ ಕಡಲು; ಕವಿಯ ಕನಸೂ ಹಸಿರು.

ಆದರೇನಿಲ್ಲೊಂದು ಕಪ್ಪು ಹಸುರಿನ ಗಿಡದ
ಕೊಂಬೆಯಲಿ ತಿಳಿಹಳದಿಹೂ ಕಳಿಕ ಮಧುಮಾಸ-
ದಪ್ಸರೆಯು ನಾಗುತಿರೆ, ಕೆನ್ನೆಯಿಂದುದುರಿರುವ
ಅರಿಸಿನದ ಹುಡಿಯಂತೆ, ಹೊಳೆಯುತಿವೆ ಮಿಂಚುತಿವೆ.
ಶ್ರಾವಣನ ನಿಯಮವನು ಮೀರಿನಗುತಿಹವೇನೊ!
ನಿಯಮದಪವಾದದೊಳೆ ಚೆಲುವು ಹುದುಗಿಹುದೇನೋ!

—ಕೀರ್ತಿನಾಥ

## ಬಗೆಗೆಟ್ಟ ಬಾಳು * * *

೧

ಗ್ರೀಷ್ಮದಲಿ ಮಾಕಂದವೊಂದು ಫಲಿಸಿತು ಪೂತು
ಸಕಲರಿಗು ಆ ಮರದ ಮೇಲೆ ಕಣ್ಣು;
ಒಳಗೊಳಗೆ ಬೆಂದು ಬೇಗುದಿಗೊಂಡು ಬಳಲಿರಲು
ಹೆಣ್ಣುಹೃದಯವು ಸೋತು ಹಣ್ಣು ಹಣ್ಣು.

೨

ತೋಷಗೊಂಡಿತ್ತು ಚಿಕ್ಕಸಬಟ್ಟು ಕೈತಟ್ಟಿ
ಕುಣಿಕುಣಿಯುತಲಿ ಕೇಕೆ ಹಾಕಿ ಲೋಕ;
ಚಿಂತೆ ಕಣಿಗಳ ಕುಣಿಸೆ ಎದೆಕುದಿದು ಕತಕತಿಸಿ
ಮರವಾಯ್ತು ಶೋಕವುಕ್ಕುಕ್ಕಿ ಮೂಕ.

೩

ಚೇರಿ ಜಾರಿಣಿಯೆಂದು ಮೂಗುಮುರಿಯಿತು ಸೃಷ್ಟಿ
ಕಾರಿ ನಂಜನು ತೂರಿ ಅಣಕು ನಗೆಯ;
ನಂಜುನಗು ಮಾಕಂದವನು ಸಣಸಿ ತಿಣುಕಿಸಿತು
ಉರವಣಿಸುತೆರಗೆರಗಿ ಕೆಣಕಿ ಬಗೆಯ.

೪

ದೂಡಿತೇ ಮೈಕೊಡವಿ ಬಂಧುಬಳಗವು ಕೂಡ
ಓಡಿತೇ ನಡುನೀರಿನಲ್ಲಿ ತೊರೆದು!
ಎಳೆಗಾಳಿಯೂ ತೋರಿತದಕೆ ಬಿರುಗಾಳಿಯೊಲು
ಬಾಳಿಸಿಸಿತಾ ಮರಕೆ ಬರಿದು ಬರಿದು.

೫

ನಸುವು ದಯದೋರದುಳಿದುಳಿದೆಲ್ಲರೂ ಹೋಗೆ
ಆಗೀಗ ಇರುಳು ಬರುತ್ತಿತ್ತು ಗೂಗೆ;
ಆ ಮರದಲೇ ಗೂಡ ಕಟ್ಟಿ ಬೀಡನು ಬಿಟ್ಟು
ನೆಲೆನಿಂತು ಸಂತಯಿಸುತ್ತಿತ್ತು ಕಾಗೆ.

೬

ಪಡೆಪೆರಸಿ ದುಃಖಪೇರೇರಿ ಬರುವುದ ಕಂಡು
ಮರವು ಹೇಳಿತು— ‘ ಬಾಳೊಳಿಲ್ಲ ಹುರುಳು ! ’
ಆದರೂ ಮುದ್ದು ಮಿಡಿಯನು ನೋಡೆ ಮನವೊಸರಿ
ಮಿಡಿದಿತ್ತು ಹೆಂಗರುಳು ತಾಯಿಗರುಳು.

೭

ಕೆಲದ ತರುಲತೆಗಳೇ ಕಿವಿಯನೂದಿದವೇನೊ
ಮರುಸುಗ್ಗಿಯಲು ಮರವು ಫಲಿಸಲಿಲ್ಲ;
ನೋವಿನಲಿ ತಲೆತಗ್ಗಿ ಕುಬ್ಜವಾಯಿತು ಕುಗ್ಗಿ
ನೆಲದೊಳಗೆ ಬಹುಕಾಲ ನೆಲೆಸಲಿಲ್ಲ.

— ಸೂರ್ಯ ಅವಧಾನಿ

# ಕಡಲ ಮೊರೆತ * * *

೧

ಹೃದಯ ಮಿಡಿತವೇಕಿದು,
ಹೃದಯ ರಮಣ ಬರುವನು,
ಮುಗಿಲ ಮರೆಯ ಜಲವಿಹಾರ-
ದಿಂದ ಮಿಂದು ಬರುವನು,
ಇಂದು ಈಗ ಕರೆವನು.

೨

ಮುತ್ತು ರತ್ನ ಕೆಳಗೆ ತುಳಿವ
ಅತ್ಯುನ್ನತ ಸಿರಿಯ ಬಳಿಯ—
ಲೊಗೆದ ನನಗೆ ಸಂಪದ
ಏನು ಕೊರತೆ? ಆದರೇನು,
ನಾನಿದೀಗ ಬಯಸುತಿಹೆನು
ಮಾಲೆಗಾಗಿ ಪ್ರೇಮದಾ !

೩

ಉಬ್ಬಿ ಉಬ್ಬಿ ಉಬ್ಬಿ ಎದೆಯು
ತಬ್ಬಲೆಂದು ಕಾದು ಕಾದು
ನಿನ್ನ ನೋಡಿ ಸೋತಿದೆ.
ಮುಂದು ಮುಂದು ಪುಟಿದು ಎದ್ದು
ಧಾವಿಸಿ ಸಾಗರವ ಬಿದ್ದು
ತೋಳ-ತೆರೆಯ ಚಾಚಿದೆ. !

—ವ್ಹಿ. ಎಚ್. ದೇಸಾಯಿ

# ಬಂಜೆಗನಸು * * *

೧

ಬಾಳು ನಶ್ವರವೆಂದು ಸುಖದಿರವು ಕಿರಿದೆಂದು
ಸಾರಿ, ಕಿಡಿಯಾಗಿ, ಹೊಗೆಯಾಗಿ
ಬೂದಿಯಾದುದು ಕೊನೆಯ ಸಿಗರೇಟ ತುಂಡು.
ಹೊಗೆಯುರುಳಿ, ಉರುಳಿ, ಸಾಗಿ
ತೇಲಿತ್ತು ಸುರುಳಿ ಸುರುಳಿಯಾಗಿ
ಅತೃಪ್ತ ಮನ ತಾನು ಸುಖದ ಅನಿಮಿಷದಿಂದ ಮರುಳಾಗಿ
ಸುತ್ತುಮುತ್ತೆತ್ತಲೂ ಹರಡಿರುವ
ಧೂಮ್ರಜಾಲದಿ ಸಿಲುಕಿ
ಏನೇನೋ ಕನವರಿಸುತಿದೆ:

೨

ಇಳಿಹೊತ್ತು.
ಸಂಜೆಗೆಂಪಳಿಸಿ, ಭಣಗುಟ್ಟುತಿದೆ
ಪಡುವಣದ ಹಸೆ, ಬೆಳಕಾರಿ
ಕತ್ತಲೆಯು ನುಗ್ಗುತಿದೆ.
ಗಿರಣಿಯಾಳ್ಗಳ ಗುಂಪು
ಬೀಡಿ ತುಂಡನು ಕಚ್ಚಿ, ಹರಟುತ್ತ
ಬಾಳಿನಿನ್ನೊಂದು ದಿನವನ್ನು
ಆಘಾತವಿಲ್ಲದಲೆ ಕಳೆದ ಸಂಭ್ರಮದಲ್ಲಿ
ಹೊಗೆಯುಗುಳಿ ಸಾಗುತಿದೆ:
ಸಂತೃಪ್ತ ನಗೆಮಿಂಚು—
ಕೊನೆಯ ಬೀಡಿಯ ತುಂಡು.

೩

ಥೂ ! ಅಯ್ಯೋ ! ಕೈಯ ಸುಟ್ಟಿತು ಕಿಡಿಯು.
ಅದು ಬೆಳಕಲ್ಲ, ಕಿಡಿಯೇ.
ಪೂರ್ತಿ ಮುಗಿಯಲು ಬಂದ ಸುಟ್ಟ ಸಿಗರೇಟಿಂದೆ
ಉಳಿದ ಕೊನೆಯ ಕಿಡಿಗೇಡಿ ಕಿಡಿಯು.
ಕನಸೊಡೆದು ಪುಡಿಯಾಯ್ತು !

೪

ಇದಿರು ಬಿದ್ದಿದೆ ಬೂದಿ
ದಗ್ಧ ಕನಸಿನ ಬೂದಿ.
ಸುಟ್ಟ ಸಿಗರೇಟ ತುಂಡು.
ಬಾಳು ನಶ್ವರವೆಂದು ಸುಖದಿರವು ಕಿರಿದೆಂದು
ಕೆಣಕಿ, ಕಿಡಿಯಾಗಿ, ಹೊಗೆಯಾಗಿ
ಬೂದಿಯಾದುದು
ಕೊನೆಯ ಆ ಸಿಗರೇಟ ತುಂಡು.

—ಖಾಸನೀಸ ರಾಘವೇಂದ್ರ

## ನಿರೀಕ್ಷೆ

* * * *

ನಿಮಗಾಗಿ ಕಾಯ್ದಿಹೆನು ಮನದನ್ನ,
ಎಂದು ಬರುವಿರೋ—
ನೀವೆಂದು ಕರೆವಿರೋ ?—
ಏಕಾಕಿ ಜೀವನವು ಬೇಸರಾಗಿದೆ ನನಗೆ
ದಿನವು ಒಂದೇ ಹಾಡು,—ಹಾಳು ಓದು.
ಎಂದು ಬರುವಿರೋ—
ನೀವೆಂದು ಕರೆವಿರೋ ?— ||ಪ||

* * *

ಎನ್ನ ಪದವಿಯು ನಿಮ್ಮ ಪಾದತಲದಲಿ ಇಡುವೆ
ಯಾವ ರೀತಿಯ ಬಿಂಕ ಬೇಡವೆನಗೆ;
ಯಾವ ನೂತನ ಹೆಣ್ಣ ಕಲ್ಪನೆಯು ನಿಮ್ಮಲ್ಲಿ
ವಿಷಬೀಜ ಬಿತ್ತುವುದು ಸೇರದೆನಗೆ.

ದಿನರಾತ್ರಿ ನಿರ್ಧಾರ,—ನೀವು ಕಂಡರೆ ಒಮ್ಮೆ
ಮನದ ಮಾತುಗಳೆಲ್ಲ ಹೇಳ್ವೆನೆಂದು,
ನೀವು ಹತ್ತಿರ ಕಾಣೆ ಮಾತೆ ಹೊರಡದು ನನಗೆ
ಬರಿ ನಿಮ್ಮ ಮುಖದರಳ ನೋಳ್ಪೆ ನಿಂತು!

ದಾರ್ಶನಿಕ ನೀವುಗಳು ಒಳಹೊರಗ ತಿಳಿಯುವಿರಿ
ನನ್ನ ಹೃದಯದ ಒಲವ ತಿಳಿದಿರುವಿರಿ,
ನಿಮಗೇಕೊ ಸಂಕೋಚ ಹಿರಿಯರನು ಕೇಳಲಿಕೆ?
ಅವರು ಒಪ್ಪದೆ ಇಹರೆ? ನೀವೆ ನೋಡಿ.

ನಮ್ಮ ಪದ್ಧತಿಯಂತೆ ಕನ್ನೆಯವರೇ ಕೇಳ-
ಲೆಂದೇನೊ ಸುಮ್ಮನಿರಬಹುದು ನೀವು,
ರೂಢಿವಂತರೊ ನೀವು? ಅಭಿಮಾನ ಕುಂದುವುದೆ ?
ನನಗಾಗಿ ಕರುಣಿಸಿರಿ ತಿಳಿದ ನೀವು.

ಜೀವನದ ತೊಡಕುಗಳು ನಿಮ್ಮ ಮನೆ ಬಾಳಿನಲಿ
ನೋವು ಸಂಕಟಗಳನು ತಂದಿರುವುವೇ ?
ಜೀವನದ ಕಹಿಯುಂಡ ನೀಲಕಂಠರೊ ನೀವು ?
ಗಂಭೀರ ಜೀವಿಗಳೆ ? ನಾನು ತಿಳಿಯೆ.

ನಾನು ಲಜ್ಜೆಯ ಭೀರು,—ನಿಮ್ಮ ಬಾಳನು ತಿಳಿಸಿ
ಕೇಳಬಾರದೆ ಅದನು ? ಮೌನವೇಕೆ ?
ನಿಮಗಿರದೆ—ಪ್ರಶ್ನೆಗಳು ಸಾಮಾನ್ಯಗಿರುವವೇ ?
ಹೇಳಬಾರದೆ ನನಗೆ ಚಿಂತೆ ಏಕೆ ?

ನಿಮ್ಮ ನೆನಪೇ ನನಗೆ ಕನಸಿನಲಿ ನನಸಿನಲಿ
ಭವ್ಯರಾಗಿರಿ ನೀವು ಬಾಳಿನಲ್ಲಿ,
ದೈವ ಕರುಣೆಯು ನಿಮಗೆ ಎಂದೆಂದು ಇರುತಿರಲಿ
ದೀಶಕ್ತಿ ತುಂಬಿರಲಿ ಹೆಜ್ಜೆಯಲ್ಲಿ.

ನಿಮ್ಮೊಡನೆ ಈ ಬಾಳು ಸೌಖ್ಯಮಯವೆಂದಿರುವೆ
ನಿಮ್ಮೊಡನೆ ಕಷ್ಟಗಳ ಸಹಿಸಬಲ್ಲೆ,
ಕಲಿತ ಹೆಂಗಳು ಇಂದು ಕೌಟುಂಬ ಜೀವನದಿ
ನಿರುಪಯೋಗಿಗಳಂತೆ !—ಕೂಗು ಹುರುಳೆ ?

ಏಸೊ ದಿನ ಕಳೆದಿಹವು ನಿಮ್ಮ ಕಾಣದೆ ನಾನು,
ಊರಲಿಲ್ಲವೆ ? ನಿಮ್ಮ ಬಳಗವೆಲ್ಲಿ ?
ನಮಗೆ ತಿಳಿಯದೆ ಪ್ರೀತಿ ಬೆಳೆದು ನಿಲ್ಲುವದಲ್ಲ
ಎಂಥ ಮೋಹದ ಸೆಳೆತ ಬಾಳಿನಲ್ಲಿ !

ನಿಮ್ಮ ಮಮತೆಯ ಎದೆಯ ಮೇಲೆ ತಲೆಯನು ಇರಿಸಿ
ಸುಖದುಸಿರು ಬಿಡುವಾಸೆ ಎನಗೆ ದೊರೆಯೆ !
ನಿಮ್ಮ ಸಂಸ್ಕೃತಿಯು ಚಿನ್ನದ ಒಡವೆ ತೊಡುವಾಸೆ
ಹರಳಿನುಂಗುರ ಚೆಲುವು,—ಭಾಗ್ಯದರಸೇ !

ನಿಮ್ಮ ನುಡಿ, ದೃಷ್ಟಿಗಳು ನಿಮ್ಮಾಸೆ ಹೆಚ್ಚಿಸಿವೆ
ನಿಮ್ಮ ಸತಿ ನಾನಾಗಬಹುದಲ್ಲವೆ ?

ಆದರ್ಶದಂಪತಿಗಳಾಗಲಾರೆವೆ ನಾವು ?
ನನ್ನಾಸೆ ಸಫಲತೆಯ ಪಡೆಯಬಹುದೆ ?
ಘನತೆಯಾ ಬಾಳನ್ನು ನಡೆಸುವಿರಿ ನೀವೆಂದು
ನನಗೆ ನಂಬಿಕೆಯುಂಟು ಹೇಳಲೆಂತು ?
ಪುಣ್ಯವಂತಿಯು ನೋಡಿ, ನಿಮ್ಮ ಕೂಡುವ ತರುಣಿ,
—ಆ ಭಾಗ್ಯ ಸಿಗಬಹುದೆ ? ಹೇಳಲೆಂತು ?
ಆ ಸರವು ಜೇಸರವು ಮೈಯೆಲ್ಲ ತುಂಬಿಹವು
ಮನೆ ಮನಸು ಭಣಭಣವು ಇರುವುದೊಮ್ಮೆ
ಕಿಟಿಕಿಯಾಚೆಗೆ ಬಿರಿತ ಸಂಪಗೆಯು ಬೇಕಿಲ್ಲ,
ಸಂಜೆಗೆಂಪಿನೊಳೊಮ್ಮೆ ಕಾಂಬೆ ನಿಮ್ಮ.
ಮೋಹಜಾಲದಿ ಸಿಲುಕಿ ಬಾಳತೊಂದರೆ ಮರೆತು
ನಿಮ್ಮೊಡನೆ ಮದುವೆಯನು ಬಯಸುತಿಲ್ಲ;
ನಿಮ್ಮ ಪ್ರೀತಿಯು ಕೊಡುಗೆ ತಾಳ್ಮೆಯದು ಸಾಕೆನಗೆ
ಹೊಂದಿಕೆಯ ಜೀವನದಿ ನಡೆವೆ ನಲ್ಲ.
ಪ್ರೀತಿಯದು ಕಾರಂಜಿ, ಬಣ್ಣಬಣ್ಣದಿ ಚಿಮ್ಮಿ
ಮುಸುಕು ಹಾಕಿಹುದೆನ್ನ, ನಿಮಗೆ ಗೊತ್ತೆ ?
ಹೃದಯದಲಿ ಧಗೆಧಗೆಯು, ತಿಳಿಯದಿರುವಿರೆ ನೀವು ?
ವಂಚಕನು ಬರದಿರಲಿ ನಡುವೆ ಮತ್ತೆ !

* * *

ಪ್ರೇಮ ದೇವತೆ ! ತಾಯೆ, ಹರಸು ತಿಳಿಯದ ನನ್ನ
ಅವರ ಚಿತ್ತದಿ ನನ್ನ ಪ್ರತಿಮೆಯಿರಿಸು,
ಉಚ್ಚ ಸಂಸ್ಕೃತಿಯೊಡನೆ ಒಲುಮೆ ಬಳ್ಳಿಯ ಬೆರಸಿ
ಜೀವನದಿ ನಗೆ ಹೂವ ಸುರಿಸಿ ನಲಿಸು !

—ಎಲ್. ಬಿ. ಪಾಟೀಲ ಕುಲಕರ್ಣಿ

# ಆತ್ಮಸತಿಯ ಸ್ವಯಂವರ * * *

೧

ಯಾವ ದೈವಕೆ ಶರಣು ಎನ್ನಲಿ
ಯಾರ ಚರಣಕೆ ನಮಿಸಲಿ ?
ಯಾರು ನನ್ನವರೆಂದು ಕರೆಯಲಿ
ಯಾರಿಗೆನ್ನನು ನೀಡಲಿ ?

೨

ನೂರು ಚೆಲುವಿನ ರೂಪ ನಿಂತಿವೆ
ಅವರೊಳಾರೆಡೆ ತೆರಳಲಿ ?
ಯಾರ ಚೆಲುವಿನ ಕಾಂತಿವರ್ಷದಿ
ಹರ್ಷಸೂಸುವುದೆನ್ನಲಿ ?

೩

ಸತ್ಯಲೋಕದ ವೀರಪುರುಷರು
ಒಬ್ಬರಿಬ್ಬರು ಸುಳಿವರು ;
ದೂರದಿಂದಲೆ ಮೂಕ ಸನ್ನೆಯ
ಮಾಡಿ ತಮ್ಮೆಡೆ ಕರೆವರು.

೪

ಅವರ ಕಡೆ ನಡೆದೆನ್ನ ಮನವನು
ಸೆಳೆದು ನಿಲ್ಲಿಸಿ ಮೇಲ್ಗಡೆ,
ಚುಕ್ಕೆಯಾಚೆಯ ನೀಲ ಶೂನ್ಯದಿ
ಕಣ್ಣ ತಿರುಗಿಸಿ ನೋಡಿದೆ !

೫

ಏನು ಶಾಂತಿಯು ರೂಪ ನಿಂತಿದೆ
ಹರ್ಷ ತುಂಬಿದೆ! ಸೂಸಿದೆ!
ಮೌನ ಚಾರಿಯು ಬೀಸತೊಡಗಿದೆ
ನಲಿವು ನೃತ್ಯವ ನಡೆಸಿದೆ.

೬

ಯಾವ ರಾಜನೆ? ಎಂಥ ದೇವನೆ?
ಕಣ್ಣ ಸೆಳೆಯುವನಲ್ಲಿಯೆ!
ಏನು ಮಾಯದ ಮಾಟಗಾರನೆ!
ಹೊರಳಿ ನೋಡದೆ ಕುಳಿತನೆ!

೭

ಅಮ್ಮ, ಬಾರೆ! ಅಕ್ಕ, ನೋಡೆ!
ಎಂಥ ಬಿಂಕದ ಪುರುಷನೆ!
ಏನು ಮಂತ್ರದ ಗಾಳಿಯೂದಿದ!
ನಾನೆ ನಾಚಿಕೆ ಬಿಟ್ಟೆನೆ?—

೮

ತಾಯಿ, ಅಪ್ಪಣೆ ನೀಡು ಹೋಗುವೆ
ಅವನ ಮೂರ್ತಿಯ ಸನಿಯಕೆ;
ದೂರದಿಂದಲೆ ಮಾಲೆಯರ್ಪಿಸಿ
ನಮಿಪೆನಾತನ ಚರಣಕೆ!

—ಆರ್. ಜಿ. ಕುಲಕರ್ಣಿ

ಸೀ. ಬಿ. ಎ.

# ಮೇಘ   *   *   *   *

೧

“ ಪಡುವಣದ ಕಡಲಿಂದ ಉಗಿಗೊಂಡು ಓಡುತಲಿ
ನಡೆದಿರುವಿರೆಲ್ಲಿಹುದು ನಿಮ್ಮ ನಿಜ ಪಯಣ ?
ಬೆಟ್ಟದಾ ಬದಿಯಲ್ಲೊ ? ಹಳುಬೆಳೆದ ಬನದಲ್ಲೊ ?
ಇಷ್ಟವಿದ್ದೆಡೆ ಇಹುದು ನಿಮಗೆ ತಾಣ ”—

೨

—ಬಿಳಿದು ಕರಿದನು ಹೊದೆದು ವಿವಿಧ ರೂಪವ ತಳೆದು
ನೆಳಲು ಬೆಳಕನು ಕಂಡಿತಾ ಮುಗಿಲ ಬಳಗ ;
ಚಳಿಯ ಮುದ್ದಿಸಿ ಮುಂದೆ ಹನಿಗೊಂಡು ಮಳೆಯಾಗಿ
ಇಳೆಗಿಳಿದು ಬಾಳನ್ನು ಬೆಳಗಿತಾಗ.

೩

ಮಳೆಗರೆವ ಮೇಘವದು ಜೇನುಮನೆಯಂತಿಹುದು
ಬಳಿಯಲಿದ್ದುದನಿತ್ತು ಕಡಲ ಕೂಡುವದು ;
ಪ್ರಕೃತಿ-ಪುರುಷರ ನಿಲುವು ಮೇಘ-ಸಾಗರದಂತೆ
ಸಾಕಾಗದಾಟವಿದು ಸಾಗುತಿಹುದು.

—ಬಸವರಾಜ ನರೇಗಲ್ಲ
ಸೀ. ಬಿ. ಎ.

# ಕುಣಿದು ದಣಿಯದ ಸೋಗೆ * * *

ಹಲಸಂಗಿ ಮಾಮರದ ನೆಳಲಿನಲಿ ಬಗೆದುಂಬಿ
ಕುಣಿದಿತ್ತು ಮಧು ಮಧುರ-ಚೆನ್ನ ಸೋಗೆ;
ಆಧ್ಯಾತ್ಮದಾಕಾಶದಭ್ರಗಳ ಎದೆ ಕರಗಿ
ಸುರಿದಿತ್ತು ಶಾಂತಿ-ಜಲ ಅದು ಕುಣಿವ ಹಾಗೆ!
ನೂರು ನೇತ್ರದ ಛತ್ರ ಬಿಡಿಸಿ ಕಣ್ಣೆವೆ ಬಿಚ್ಚಿ
ದೇವರಾಯನ ನಿಲವನರಸಿದ್ದಿತು !
ಅವನ ಕೃಪೆಯನೆ ಜಗದ ಕಣಕಣದಿ ಕಂಡುಂಡು
"ಧನ್ಯೋಽಸ್ಮಿ"—ಎಂದು ತಾನರಳಿದ್ದಿತು!
"ಪೂರ್ವ ರಂಗದ" ಕುಣಿತ-ಹರುಷದಲಿ ತೇಲುತ್ತ
"ಕಾಳರಾತ್ರಿಯ" ಕಿಚ್ಚಿಗೈತಂದಿತು!
ಕಿಚ್ಚು ದಾಟಿದ ಹೊನ್ನು-ಚೆನ್ನ-ಸೋಗೆಯ ಕುಣಿತ
"ಬೆಳಗಿ"ನೊಳು ಶಾಂತಿಯಲಿ ಒಂದಾಯಿತು !
ಎದೆ ತುಂಬಿದಂತೆಲ್ಲ ಅದು ಮೇಲಕೆದ್ದಿತ್ತು
ಕರೆವ ದೇವನ ಕೈಗೆ ನಿಲುಕಿದ್ದಿತು ;
"ನಲ್ಲ ನಲ್ಲ!" ಎಂದು ಕುಣಿದು ದಣಿಯದ ನವಿಲು
ನಲ್ಲದೆಲೆಯಲಿ ಕುಣಿಯಲೆಂದೋಡಿತು !

—ಜಿನದತ್ತ ದೇಸಾಯಿ
ಸೀ. ಬಿ. ಎ.

# ಮಧುರಚೆನ್ನ * * *

೧

ಕನ್ನಡದ ಸಾಹಿತ್ಯವನದೊಳಗೆ ಹೂವಿಡಿದ
ಆಧ್ಯಾತ್ಮ ಮಾಮರದ ಶಾಖೆಯಲ್ಲಿ,
ಕಿಸಲಯದ ಮರೆಯಾಗಿ ಕುಕಿಲುತಿಹ ಕೋಗಿಲೆಗೆ
ವಿಧಿಯೆಚ್ಚ ಕೂರಲಗು ತಾಗಿತಲ್ಲಿ.

೨

ತುಂಬಿ ಹರಿಯುವ ತೊರೆಯು ಕಷ್ಟದರೆಗಳ ಕೊರೆದು
ಮೂಲದಾ ಮುನ್ನೀರ ಬೆರೆಯಿತೇನೋ ?
ಮೊಗ್ಗರಳಿ ಸಿಂದಾಗ ಹುಡಿಯು ಕೂಡದ ಮುನ್ನ
ವಿಧಿಯು ಅರ್ಚನೆಗೆಂದು ಕೊಯ್ದುನೇನೊ ?

೩

ಜೀವನದಿ ಇಟ್ಟಣಿಪ ಸರಸವಿರಸಗಳೆಂಬ
ಬೆಲ್ಲ ಬೇವುಗಳನ್ನು ಜಲದಿ ಬೆರಸಿ
ಪಾನಕವ ಅಣಿಮಾಡಿ ಮೊಗವರಳಿಸೀಂಟುತ್ತ
ಕವಿಮಲ್ಲ ಕಲಿಮಲ್ಲನಾದೆ ಅರಸಿ.

೪

ಗಾನಯೋಗಿಯ ತೆರದಿ ಹೊಮ್ಮಿದೆದೆಗಾನರಸ
ಆಲವಾಲವ ಹೋಲ್ವ ಕಿವಿಗುಣಿಸಿದೆ ;
ಆನಂದದಾ ಬಳ್ಳಿ ಹೃದಯದಲಿ ಹೂವಿಟ್ಟು
ಮೊಗದಿ ಸೌಸವ ಸೂಸುವೊಲು ತಣಿಸಿದೆ.

೫

ಸಾಹಿತ್ಯಸೇವೆಯದು ಶಾರದೆಯ ಅರ್ಚನೆಯು
ಜನಮನವನರಳಿಸುವುದದುವೆ ಫಲವು;
—ಎಂಬ ಸೂತ್ರವ ಚಿತ್ತಭಿತ್ತಿಯೊಳಗೊತ್ತಿರುವೆ
ಹುರುಳ ಸಾಹಿತ್ಯವಿಹುದದಕೆ ಬಲವು.

೬

ನಿನ್ನ ಕೃತಿಸಾಗರದ ಆಳದಾಳದೊಳಿರುವ
ಶಾಂತಿಪ್ರೀತಿಗಳೆಂಬ ಮುತ್ತುಗಳನು
ಆಳಕಿಳಿಯದೆ ತೇಲ್ವ ಹುಲುಮನುಜ ಸಾರುವನೆ?
ತಳಮುಟ್ಟಿ ಮುಳುಗುವನೆ ಬೆಳಗುತಿಹನು.

೭

ಹೆಸರಿನಲಿ ಉಕ್ಕುತಿಹ ಮಾಧುರ್ಯವದು ನಿನ್ನ
ಬಾಳಸಂಪುಟದಲ್ಲಿ ಮೂಡಿರುವುದು.
ಓ ‘ಮಧುರ-ಚೆನ್ನ!’—ಈ ಪದದ್ವಂದ್ವಗಳ ಮಿಲನ
ಇನಿಗಬ್ಬು ಜೇನಿನಾ ತಳ್ಕೆಯಹುದು!

—ಅನ್ನದಾನಿ **ಕಮಲಾಪೂರ**
ಜ್ಯೂ. ಬಿ. ಎ.

# ಮೊರೆ

*  *  *  *

೧

ಈ ಜೀವ-ನೌಕೆಯದು ಆವ ಕಡೆ ಸಾಗಿಹುದೊ
ಆಳವಾಗಿಹ ಭವದ ಶರಧಿಯಲ್ಲಿ !
ಮಾಯೆ ಮರವೆಯ ತೆರೆಗಳೀಡಾಟದಲಿ ಸಿಲುಕಿ
ಮುಳುಗುತಿಹೆ ವಿಷಯದಾ ಮಡುವಿನಲ್ಲಿ !

೨

ಭಾವದುರುಬಿರುಗಾಳಿಯಲಿ ನಡುಕಿ ಮಿಡುಕುವುದು
ಬಾಳ ತೀರವ ಸಾರುತಿರುವ ಮೊದಲು ;
ಸುಖದುಃಖವೆಂಬ ಏರಿಳಿತಗಳ ಮಧ್ಯದಲಿ
ಮುಂಗಾಣದಲೆ ನೌಕೆ ಮುಗ್ಗರಿಪುದು.

೩

ಆತ್ಮನಾವಿಕನೆಡೆಗೆ ಅರಿವೆಂಬ ಹುಟ್ಟನ್ನು
ನೀಡಿ ದಾರಿಯ ತೋರು ಗುರುವೆ, ನನಗೆ
ಆತ್ಮ ಅರಿವುಗಳ ತಳ್ಕೆಯಲಿ ದಾಟಲುಬಹುದು
ಜೀವ-ನೌಕೆಯು ಭವದ ಸಾಗರವನು.

—**ಕೆ. ಎಮ್. ಪಾಟೀಲ**
ಜ್ಯೂ. ಬಿ. ಎ.

## ಧಾರವಾಡ * * * *

೧

ಸುತ್ತುವರಿದು ಮೈಮುತ್ತುವ ಮರಗಳ
ಮಧ್ಯದಿ ನಿಂತಿಹ ಧಾರ್ವಾಡ!
ಸುತ್ತಲು ಮೆರೆಯುವ ದಿನ್ನೆಯ ಮೇಲ್ ಕ-
ತ್ತೆತ್ತಿ ನಿಂತಿಹುದು ಧಾರ್ವಾಡ!

೨

ಕಾಡೋ ನಾಡೋ ತಿಳಿಯದು ಊರು
ಮೊದಲ ಬಾರಿಯಲಿ ಸುತ್ತಿದರೆ!
ಕಾಡ ಸಹಜ ಸೌಂದರ್ಯವು ಇಹುದು
ನಾಡ ಕಾಡ ಸಮ್ಮಿಲನವಿದು !

೩

ಮರಗಳ ಸಾಲಲಿ ತೂರುತ ಓಡುವ
ಸೊಬಗಿನ ನೀಳ್ದಾರಿಗಳಲ್ಲಿ!
ಬಿಡುಮುತ್ತಿನ ಜೆಲುಸರದಲಿ ಹಚ್ಚನೆ
ಮಣಿ ಕೋದಂತಿಹ ತಾಣಗಳು !

೪

ಚಿತ್ತರಿಸಿದ ಸೌಂದರ್ಯದ ನಿಧಿಯನು
ಬಾಚುತೆ ಕವಿಗಳು ಸಾಹಸದಿ,
ಸೌಂದರ್ಯವ ಸೆರೆಹಿಡಿಯಲು ಹೋಗಿ
ಸೆರೆಯಾಗಿರುವರು ನೋಡಿಲ್ಲಿ!

೫

ಪ್ರಕೃತಿಯ ಚೆಲುವಿನ ಬಲೆಗೊಳಗಾಗಿ
ರಸಿಕರು ಬರುವರು ಓಡೋಡಿ!
ಶಾಂತಿಯ ಸುಮಧುರ ಮಾಯೆಗೆ ಸಿಲುಕಿ
ಬರುವರು ನಿವೃತ್ತ ಜನ ನೋಡಿ!

೬

ಮಾವಿನ ತಳಿರಿನ ಜೊಂಪದೊಳೊರಗಿ
ಕೀರ್ತಿ ಕೀಟಲೆಗೆ ಕಿವಿಗೊಡದೆ,
ಪಂಚಮದಿಂಚರ ಕೋಗಿಲೆಯಂದದಿ
ಹುದುಗಿ ಹೊಂಚಿಹುದು ಧಾರ್ವಾಡ !

—ಎನ್. ಎಸ್. ಕುಲಕರ್ಣಿ
ಆಯ್. ಎಸ್ಸಿ.

# ಬಿಸಿಲು—ಮಳೆ

೧

ಅತ್ತ ಬಿಸಿಲು ಹೋಗಿ ಇತ್ತ ಬಂದಿದೆ ಮಳೆ
ತಂದಿದೆ ಇಳೆಗೆ ನವೀನ ಕಳೆ !
ಕೊನರಿದವು ಕಂದಿದ ಕಾನನ
ಕೊನರಲಿ ಇಂತೆ ಮರುಗಿದ ಮನ
ಎಲ್ಲೆಡೆಗೆ ಹಸಿರು ಹಾಸಿಗೆ ಹಾಸಿವೆ,
ಹಳದಿ ಕೆಂಪು ಹೂವರಳಿವೆ.
ಪರಮಾತ್ಮನ ಚೈತನ್ಯದಂತೆ ಹೊಳೆಯುತಿವೆ.

೨

ಎನಿತು ಚೆಲುವು ಕೆಂಪು ಹೂಗಳ ಗುಂಪು !
ಕೊಡುತಿವೆ ಅಂತರಂಗಕ್ಕೆ ಅನಂತ ತಂಪು.
ಏನು ಆ ಕಾಂತಿ !
ಏನು ಆ ಶಾಂತಿ !

೩

ಬೆಟ್ಟದ ತುತ್ತ ತುದಿಯನು ಮುಟ್ಟಿಟ್ಟು
ನಿಂತಿವೆ ಕಾರ್ಮೋಡಗಳು
ಒಮ್ಮೆ ಬಿಸಿಲನು ಬೀರುತಿವೆ.
ಒಮ್ಮೆ ಮಳೆಯಾಗಿ ಸುರಿಯುತಿವೆ.
ಒಮ್ಮೆ ಮಳೆ, ಒಮ್ಮೆ ಬಿಸಿಲು
ಒಮ್ಮೆ ಹಗಲು, ಒಮ್ಮೆ ರಾತ್ರಿ
ಇದು ನಿಸರ್ಗ ಧರ್ಮ
ಇದು ನಿತ್ಯ ನಿಯಮ.

೪

ಓ ಜೀವ !
ಇಡಿಯ ಸೃಷ್ಟಿ ನಲಿದಾಡುತಿದೆ
ನೀನೇಕೆ ಬಿಮ್ಮನೆ ನಿಂತೆ ?
ಮಧು ಮಾಸದ ವಧುವಾಗಿ
ಕೊನರಿತು ನಿನ್ನ ಪ್ರಾಣಪಲ್ಲವ.
ದುಃಖದಲ್ಲಿಯೂ ತಾಳ್ಮೆಯಿದ್ದೊಡೆ
ಬಾಳ್ವೆಗೆ ಬಂದೀತು ಪ್ರಜ್ಞಾ ಮುಕುಟ
ಏಳು ! ನಲಿದಾಡು ಜೀವವೆ !

—ಕು. ಮಾಲಾ ಗೋಕಾಕ
ಜ್ಯೂ. ಬಿ. ಎ.

# ಜೀವದೇವ * * *

ಏಳು ಏಳೆಲೆ ದೇವನೇ
ಘಾಯಗೊಂಡಿದೆ ಭಾವನೆ!
ನೀನೆ ಎನ್ನನು ಕಾವನು
ಕೊಡದೆರೆನಗೀ ನೋವನು;
ತೊರೆದು ಬಾರೀ ಭವವನು
ನಿರುತ ಸೇವಿಸೆ ಜಗವನು;
ಹರಿದು ಬಂಧನವೆಲ್ಲವ
ಬಾಳಿನಲಿ ಸಾವ್ ಗೆಲ್ಲುವ;
ದೂರ ದೂರಕೆ ಸಾಗುವ
ಬಾಳ ಜೀಕವ ಜೀಕುವ;
ಬದುಕು ಬಳ್ಳಿಯ ನಿಲಿಸುತ
ಪ್ರೇಮ ಭಕ್ತಿಯ ಬಲಿಸುತ
ತಾಯ ಅಡಿಯಲಿ ಕೂಡುವ
ಅವಳ ಓರಿಮೆಯ ಹಾಡುವ!
ಕಣ್ಣ ಕಿಲ್ಬಿಷ ಕಳೆಯುತ
ಮನದ ಮಲಿನತೆ ತೊಳೆಯುತ
ತಾಯ ಮೂರ್ತಿಯ್ನ ಸ್ಮರಿಸುತ
ಜಗದಲವಳನು ಮೆರೆಸುತ
ಮುಂದೆ ಮುಂದಕೆ ಸಾಗುವ
ವಿಶ್ವ ಪಥದಲಿ ಸೂಗುವ!
ಏಳು ಏಳೆಲೆ ಜೀವನೇ
ನಿರುತ ಎನ್ನನು ಕಾವನೇ!

—ಕು. ಇಂದುಮತಿ ಕಲ್ಯಾಣಿ
ಜ್ಯೂ. ಬಿ. ಎ.

## ಸಹ್ಯಗಿರಿ

* * *

೧

ಸಹ್ಯಗಿರಿಯಲಿ ನಿಂತು ನೋಡಿರಿ
ನಿತ್ಯ ನಲಿವನು ಕಾಣಿರಿ!
ನೆಲವು ಬಾನನು ಹೊದ್ದುಕೊಂಡಿದೆ
ದಿವ್ಯ ಚುಂಬನವಾಗಿದೆ!

೨

ದೃಷ್ಟಿಯೆತ್ತರ ಬೆಳೆಸಿ ಸಾಗಿರಿ
ಮುಂದೆ ಮುಂದಕೆ ಮುಂದಕೆ
ಬಾನು ಹಬ್ಬಿದೆ ಉದ್ದ ಅಗಲಕೆ
ಸಾನು ಮೇಲಕೆ ಮೇಲಕೆ!

೩

ಬರಲಿ ಗುಡುಗಿನ ದಾಳಿಯು
ಬರಲಿ ಜಡಿಮಳೆ ಗಾಳಿಯು,
ಎದೆಯನೊಡ್ಡಿದೆ ಎದುರುಗೊಂಡಿದೆ
ಎದೆಯುಗೆಡವಲುಗಾಡದೆ!

೪

ಕಂಪು ಕಾಡಿನ ತುಂಬ ಹರಡಿದೆ
ಎಲೆಯಲಡಗಿದೆ ಮಲ್ಲಿಗೆ!
ಮುಳ್ಳುಮುಳ್ಳಿನ ಸೂಚಿವೃಕ್ಷಕೆ
ಹೊನ್ನ ಹೆಡೆ ಕೊನೆಕೇದಗೆ!

೫

ಏಸು ಸಾಸಿರ ಕಾಲ ಮಾನವ
ಕಳೆದು ನಿಂದಿತೊ ಹೀಗೆಯೆ!
ಏಸು ಮಿಂಚಿನ ಸೆಳೆಯ ಕಂಡಿತೊ
ನಗುವು ಅಳುವನು ನುಂಗಿತೊ!

೬

ಪ್ರೇಮ ಹಂಸವು ರೆಕ್ಕೆ ಬೀಸಿತು—
  ಕಡಲು ಮುಗಿಲನು ದಾಟಿತು!
ಸಹ್ಯ ಗಿರಿಯನು ಏರಿ ನಿಂದಿತು
  ಜಗವು ಬಂಧನವೆಂದಿತು !

೭

ಕಣ್ಣನಗಲಿಸಿ ನಿಂತುಕೊಂಡರೆ
  ಕಲ್ಪನೆಯು ಕೈ ಬಿಡುವದು;
ಯೋಗನಿದ್ರೆಯೊ ಕನಸೊ ಕಾಣೆನು
  ಮನಸು ಪುಲಕಿತವಾಗಲು !

೮

ಸಹ್ಯಲೋಕವ ಸುತ್ತಿ ಬಂದೆನು
  ಅಮೃತ ಶಿಲೆಯನು ಕಂಡೆನು ;
ಹೇಗೊ ಏಕೋ ಮೂಕನಾದೆನು
  ಶಿಲೆಯು ಕರಗಲು ಹರಿಯಲು !

೯

ಮುಗಿಲದೊಂದಕೊ ತೇಲಿ ಬಂದಿತು
  ಅಪ್ಪಸ್ಸೈದಿತು ಗಿರಿಯನು !
ಮುಗಿಲು ನೀರ್ನೀರಾಗಿ ಸುರಿಯಿತು
  ನವಿಲು ಕೆದರಿತು ಗರಿಯನು !

೧೦

ನವಿಲ ನೃತ್ಯವ ಕಾಣಕಾಣುತ
  ಪ್ರೇಮ ಹಾಡಿತು ಗೀತವ!
ಏಕೊ ಹೇಗೋ ಆಗಿ ಹೋಯಿತು
  ಮುತ್ತು ಮಳೆಯೇ ಸುರಿಯಿತು!

—ವಿಠ್ಠಲ ಗಾಂವಕರ
ಜ್ಯೂ. ಬಿ. ಎ.

## ಕರ್ಮವೇ ಕಾಮಧೇನು!  * * *

೧

ಒಂದುಚ್ಚ ಧ್ಯೇಯಕೆ ಹಲವು ಕೈಗಳು ನೇಹದಿಂದಲಿ ದುಡಿಯಲು
ಒಂದರಿತ ಮನ ಒಗ್ಗಟ್ಟಿನಿಂದಲಿ ಕಾರ್ಯ ಸಾಧನ ಮಾಡಲು
ಒಂದಿನಿತು ತಡೆಯದೆ ಕರ್ಮದೇವತೆ ಕಾರ್ಯಸಿದ್ಧಿಯನೀವಳು
ಒಂದೊಂದು ಹನಿಯಿಂ ಹೊಳೆಯೆ ಹರಿವುದು ಕಾಮಧೇನುವು ಕರ್ಮವೇ!

೨

ಸಚ್ಚಿದಾನಂದವನು ಪಡೆಯಲು ಕರ್ಮದೀಪ್ತಿಯು ಆದಿಮ
ಎಚ್ಚತ್ತು ಅರಿತೊಡೆ ಬೋಧೆಯಪ್ಪುದು ತ್ರಿಗುಣಗಳ ತಾ ತೊರೆಯಲು
ನಿಚ್ಚಳಪದಪ್ಪುದು ತ್ರಿವಿಧ ಶುದ್ಧಿಗು ಕಾಯಕರ್ಮವೆ ಅಂತಿಮ
ಕೆಚ್ಚೆದೆಯ ವೀರರೆ, ನಾಡ ಕಟ್ಟುವ! ಕಾಮದೇನುವು ಕರ್ಮವೇ!

**—ಜಿ. ಎಸ್. ಹೆಗಡೆ**
ಜ್ಯೂ. ಬಿ. ಎ.

# ಹಕ್ಕಿ ಹಾರಿತು * * * *

ನಮ್ಮ ಮನೆ-ಮಾಮರದ ಮೇಲೊಂದು ಚೆಲುವಕ್ಕಿ
ಬಣ್ಣ ಬಣ್ಣದ ಗರಿಯು ಕೆದರಿ ಹಾರಿತು ಮಿಕ್ಕಿ!
ಅದರ ಬಣ್ಣಕೆ ಸೋತು ಇನಿದನಿಗೆ ಮನವೋತು
ಹಿಡಿಯಲೆಳಸಿದೆ;— ಹಕ್ಕಿ ಹಾರಿ ಹೋಯ್ತು
ದೂರದೂರಕೆ ಬಾನಿನಾಚೆ ಹಾರಿತು, ಕಣ್ಣು
ತಡೆಯದಾಯಿತು, ಅದರ ಸಿಹಿ ಸನಹೆ ಚೆನ್ನು!
ನೆನೆದಂತೆ ಸಿಹಿ ಹೆಚ್ಚು;— ನನಗೆ ಹಕ್ಕಿಯ ಗಾಣ್ಕೆ
ಕನಸಾದರೂ ಅದನು ದಿನವು ನೆನೆಯುವ ಬಯಕೆ!

—ಎಲ್. ಆರ್. ಬಾಪಟ
ಆಯ್. ಎ.

# ಶಾರಮಣಿ * * * *

ಭುವನಾಂಗಣಾಗನುನತೃಷೆ
ಆತುರೆ ನವವಧುಸದೃಶೆ
ಕಾನನಾಂಬರಾರೂಢನಿಶೆ
ದಿಙ್ಮಂಡಲಗಳ ಚುಂಬಿಸೆ;—
ಹರಿವ ನೀರ ನೊರಗಿನಲ್ಲಿ
—ಪ್ರಕೃತಿ ರತಿಯ ಸೆರಗಿನಲ್ಲಿ—
ವೀಚಿಮರೀಚಿ ಅಲ್ಲಿ ಇಲ್ಲಿ
ರಸಿಕ ಹೃದಯವೊಸರಿಸೆ;—
ಹಸಿರ ನೆಲವು ಉಬ್ಬುತಿರೆ
ರವಿಯು ತೆರಳೆ ಮಬ್ಬು ಬರೆ
ರಜನಿ ಹಗಲ ತಬ್ಬುತಿರೆ
ಆ ಲೋಕದೋಕುಳಿ ದಿಶೆ ದಿಶೆ!—
ಲುಲಿತ ಲತೆಗಳಲುಗೆ ಅಲ್ಲಿ
ತೂಕಡಿಸೆ ಸಮೀರಣಂ !
ಹೂದೊಟ್ಟಿಲದಲಿ ತೂಗುತಲಿರೆ ಲತೆ
ಸಕಲ ವಿಕಲ ಹಾರಣಂ!
ಶ್ರೀಗಂಧದ ತರುಶೀತಲದಾಳದಿ
ಬನಬನದುಂಬಿದ ಕೇತಕಿಘೂಳದಿ
ಕುಣಿವಳು ನಿಶೆ ಮೌನಧ್ವನಿ ಮೇಳದಿ
ತನ್ಮಯಮೀ ಭೂ-ಜಲ-ಗಗನಂ !—
ರತ್ನ ದೀಪ್ತಿಯಾ ತಾರಾಭ್ರಮಣದಿ
ನೂಕುವಳೆಮ್ಮನು ಮೋಹನ ತಿಮಿರದಿ
ಉಗ್ರೋದಗ್ರಾಂಬರ ಕಾಳಿಮದಿ
ಗಂಭೀರಂ ಗಹನಂ ಭೂ-ಮೌನಂ !

—ವ್ಹಿ. ವ್ಹಿ. ಕಳಕಪ್ಪನವರ
ಆಯ್. ಎ.

# ಭಾರತದ ಧ್ವಜಕೆ—

* * *

ಕ್ಷಿತ್ಯಂತದಿ ಒಡೆಯುತಲಿದೆ ಸ್ಫೋಟಾಸ್ತ್ರನಿನಾದ
ಹೊನ್ಮರ್ಣ್ನಾಗೇಳುತಲಿವೆ ಜನಜನದ ವಿವಾದ
ಕೂಗುತಲಿದೆ ತ್ವೇಷದಿ ವೃತ-ವರ್ಣಂಗಳ ಭೇದ!
ಆ ಸ್ಫೋಟವ ಆ ಕ್ಷೋಭವ ಆ ಕ್ರಂದನ ಮೀರಿ
ವಿಶ್ವದ ಗಿರಿಕಂದರಗಳ ಮೂಲೆಯು ಸೇರಿ
ನಮ್ಮಯ ಘೋಷವು ಮರುದನಿಗೊಳ್ಳುವುದಿಂದು.
ನೂರ್ವರುಷದ ಹೆಣಗಾಟಕೆ
ಏಳ್ವರುಷದ ಹೊಣೆಗಾರಿಕೆ
ವಿಜಯದ ಸುಖಸಂವೇದನೆ
ಜಗದನ್ಯಾಯದ ಅಸಹನೆ
ತಳೆದಿವುಗಳ ನಿಂದಿರುವೆವು ನಿನ್ನೆದುರಿಗೆ ಇಂದೆ!
ಸೂಸಲಾ ತಂಗಾಳಿ
ಬೀಸಲಾ ಬಿರುಗಾಳಿ
ಕೊಡಲಿ ಚೆಲುತನ್ನೆಳಲು
ಸುಡಲಿ ರಣರಣ ಬಿಸಿಲು
ಚಲಿಸದಲ್ ನಿಲ್ಲುವೆವು ಅಂತೆಯೇ ಮುಂದೆ!
ವಿಂಧ್ಯನಗ ತಡೆದಿಲ್ಲ
ನರ್ಮದೆಯು ಒಡೆದಿಲ್ಲ
ಉತ್ತರದ ದಕ್ಷಿಣದ ಐಕ್ಯವನ್ನು;
ದಕ್ಷಿಣದ ಮಲಯವಲಿ
ಉತ್ತರದ ನರುಗಂಪು
ಕೂಡಿ ತಣಿಸಲಿ ಸಕಲ ಜಗದ ವ್ಯಥೆಯನ್ನು;
ದಿವ್ಯ ಮಾನವ್ಯತೆಯ
ಭವ್ಯ ಸಂದೇಶವನು
ಸೂಸಿ ಬೆಳೆಸಲಿ ಜಗದಿ ರಮ್ಯ ಶಾಂತಿಯನು!

ಯುದ್ಧ ಬಂದರೆ ಬರಲಿ—
ಶಾಂತಿ ವ್ರತವನು ಹಿಡಿದ
ಕೈ ಕೈದುಗಳ ಹಿಡಿಯೆ ಹಿಂಜರಿಯದಂಜದಿದು !
ಎಮ್ಮ ಶವಗಳ ಕೋಟೆಯನು ಸುತ್ತಲೂ ಕಟ್ಟಿ
ಎಮ್ಮಾತ್ಮಗಳನದಕೆ ಕಾವಲೆಂದಲ್ಲಿರಿಸಿ
ಹೊಯ್ದು ಹೋರಾಡುವೆವು ದುಡಿಯುವೆವು ಮಡಿಯುವೆವು !
ಎಮ್ಮ ನಭದಲ್ಲಿ ಮುಸುಕಿದರೆ ಘನ ಕಾರ್ಮೋಡ
ತುಡುಕಿಯದನುದುರಿಪೆವು ರಸವರ್ಷ ಧಾರೆಗಳ,
ನೀ ಮಾತ್ರ ಅದಕಿಂತ ಮೇಲೆ ಹಾರಾಡುತಿರು !
ನಮ್ಮ ನೆತ್ತರ ಕೆಂಪು
ಕಣ್ಣೀರಿನಿಂ ತೊಳೆದ ಶುಭ್ರ ಹೃದಯದ ಬಿಳಿಪು
ಬೆವರಿರಿದು ಬೆಳೆಸಿರುವ ಬೆಳೆಯ ಹಸಿರಿನ ಒಪ್ಪು
—ಇವುಗಳನು ಜಗಕೆ ತೋರಿಸುತ ನೀ ಹಾರಾಡು
ಸಮತೆ ಸ್ವಾತಂತ್ರ್ಯಾಂತರಾಳದಲಿ ತೂರಾಡು
ಚಿರಂತನವಂತೆಯೇ ಮೇಲೆ ಹಾರಾಡುತಿರು
ಮಾನವನ ಮಾನವ್ಯಕಾಗಿ ಹೋರಾಡುತಿರು !

**—ಗಿರೀಶ ಕಾರ್ನಾಡ**
ಎಫ್. ವಾಯ್. ಎ.

# ಜೀವನ-ನಾಟ್ಯ

*   *   *

ಜಗವದೊಂದು ರಂಗಭೂಮಿ
ಬದುಕು ನಿತ್ಯ ನಾಟ್ಯವು;
ಜೀವವೊಂದು ಪಾತ್ರಧಾರ
'ಜೀಯ'ನೊಬ್ಬ ಸೂತ್ರಧಾರ!
ಬೆಳಗು ಬೈಗು ನಮ್ಮ ಉಡುಪು;
ಚಂದ್ರ ಶಾಂತಿ ಅರುಣ ಕಾಂತಿ
ನಿತ್ಯ ಸತ್ಯದೊಡವೆ ತೊಡವು;
—ವೇಷವಿದುವು, ಭೂಷವಿದುವು.
ಗುಡ್ಡ ಬೆಟ್ಟ ಹಳ್ಳ ಕೊಳ್ಳ
ಕಡಲು ಮಂಜು ಮುಗಿಲು ಬಾನು
ಹಣ್ಣು ಕಾಯಿ ಹೂವು ಬಳ್ಳಿ
ನಿಚ್ಚ ನೋಟಕಾರರಿಲ್ಲಿ!
ಕಾಮ ಕ್ರೋಧ ಮೋಹ ಲೋಭ
—ಎಲ್ಲವನ್ನು ಹರಿದು ಹಾಕಿ
ಸೂತ್ರಧಾರನೊಡನೆ ಹೋಗಿ
ಆತ ಹೇಳಿದಂತೆ ಬಾಗಿ, —
ಅವನ ಹರಕೆ ನಾಂದಿ ಮಾಡಿ
ನಲ್ಮೆಯೆಂಬ ನಾಟ್ಯವಾಡಿ
ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು
ತಾಳದೊಡನೆ ತಾಳ ತಟ್ಟಿ, —
ನಾಟ್ಯವಾಡಿ ನಲಿಯುವ
ಹಿಗ್ಗಿ ನಲಿದು ತಣಿಯುವ
ಸೌಖ್ಯವೊಂದಿ ಬೆಳೆಯುವ
ಆತ್ಮಬಲವ ಬೆಳೆಸುವ!

**—ಜಿ. ಎನ್. ಕುಂದರಗಿ**
ಎಫ್. ವಾಯ್. ಎ.

# ಶುಭಾಶಯ * * * *

೧

ನಿಮಿಷವೊಂದು
ಹರುಷದುಂಬಿ
ವಿರಸಭಾವವಳಿಯಲಿ ;
ವರುಷವೊಂದು
ನಿಮಿಷವಾಗಿ
ಸರಸ ಭಾವ ಬೆಳೆಯಲಿ !

೨

ಹೊಸ ವರುಷದಿ
ಹೊಸ ಬಾಳಿದು
ಹೊಸತನದಲಿ ಬೆಳೆಯಲಿ !
ಜಸ ತುಂಬಿದ
ಹಸನಾಗಿಹ
ರಸಜೀವನ ಬೆಳಗಲಿ !

೩

ಕೆಳೆಯತನದ
ಹೊಳೆಯು ಹರಿದು
ಇಡಿಯ ಇಳೆಯ ತುಂಬಲಿ !
ಒಲುಮೆ ಬೆಳೆದು
ಬೆಳಕು ಹರಿದು
ಜಗವನೆಲ್ಲ ಬೆಳಗಲಿ !

—ಕೆ. ವಿ. ಹೆಗಡೆ
ಆಯ್. ಎ.

